

# ಸಿದ್ಧಗಂಗಾ



ಡಿಸೆಂಬರ್ ೨೦೦೨

ಸಂಪುಟ : ೩೮ ಸಂಚಿಕೆ : ೧೨

ಓಂ ಶ್ರೀ ಗುರುಬಸವ ಲಿಂಗಾಯ ನಮಃ

23ನೆಯ ಶರಣ ಕಮ್ಮಟ

2002 ನವೆಂಬರ 5 ರಿಂದ 8

ಶರಣ ಕಮ್ಮಟದ ಉದ್ಘಾಟನೆ

ಬಸವ ಕಲ್ಯಾಣದಲ್ಲಿ ನವೆಂಬರ್ ೫ ರಿಂದ ೮ರವರೆಗೆ ನಡೆದ ೨೩ನೆಯ ಶರಣ ಕಮ್ಮಟವನ್ನು ಶ್ರೀ ಸಿದ್ಧಗಂಗಾ ಕ್ಷೇತ್ರಾಧ್ಯಕ್ಷರಾದ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಉದ್ಘಾಟಿಸಿ ಆಶೀರ್ವಚನ ನೀಡುತ್ತಿರುವುದು. ವೇದಿಕೆಯಲ್ಲಿ : ಎಡದಿಂದ ಬಲಕ್ಕೆ ಪೂಜ್ಯರಾದ ಶ್ರೀ ಶಿವಯೋಗಿ ಸ್ವಾಮಿಗಳು, ಶ್ರೀ ಚನ್ನವೀರ ಶಿವಾಚಾರ್ಯ ಸ್ವಾಮಿಗಳು, ಶ್ರೀ ಜಗದ್ಗುರು ಸಂಗನಬಸವ ಮಹಾಸ್ವಾಮಿಗಳು, ಶ್ರೀ ಈಶ್ವರ ಖಂಡ್ರೆ, ಶಾಸಕರಾದ ಶ್ರೀ ಮಾರುತಿ ರಾವ್ ಮುಳೆ ಮತ್ತು ಶ್ರೀ ಗುಂಡಪ್ಪ ವಕೀಲ ಅವರನ್ನು ಕಾಣಬಹುದು.



ಮುಖಪುಟ
*ಬಸವ ಕಲ್ಯಾಣದಲ್ಲಿ ನಡೆದ ೨೩ನೇ ಶರಣ ಕಮ್ಮಟದಲ್ಲಿ ಪೂಜ್ಯ ಶ್ರೀ ಶ್ರೀಗಳವರಿಂದ ಆಶೀರ್ವಚನ*

ಪ್ರಧಾನ ಸಂಪಾದಕ
ಪ. ಚೆನ್ನಪ್ಪ ಎರೇಸೀಮೆ

ಸಂಪಾದಕ
ಹೆಚ್.ವಿ. ವೀರಭದ್ರಯ್ಯ

ಸಹ ಸಂಪಾದಕ
ಎಚ್.ಎಸ್. ಸಿದ್ಧಗಂಗಪ್ಪ

ಪ್ರಕಾಶಕರು
ಹೆಚ್.ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿಗಳ ಸಂಘ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ – ೫೭೨ ೧೦೪

ಮುದ್ರಕರು :
ಗೀತಾಂಜಲಿ ಗ್ರಾಫಿಕ್ಸ್,
ಸಂ. ೫, ಎಂ.ಎಸ್.ಆರ್. ಕೈಗಾರಿಕಾ ಬಡಾವಣೆ,
ಗೋಕುಲ, ಬೆಂಗಳೂರು – ೫೬೦ ೦೫೪.
ದೂರವಾಣಿ : ೩೬೦೪೦೮೭

ಲೇಖಕರ ಅಭಿಪ್ರಾಯಗಳು
ಪತ್ರಿಕೆಯ ಅಭಿಪ್ರಾಯಗಳಲ್ಲ



॥ ಓಂ ಶ್ರೀ ಗುರು ಬಸವ ಲಿಂಗಾಯ ನಮಃ ॥

**ಆವಾವ ಕಾಯಕವ ಮಾಡಿದರು ಬಸವೇಶ**
**ಆವಗಂ ಶರಣರನು ಸೇವಿಪೆನು ಬಸವೇಶ**

# ಸಿದ್ಧಗಂಗಾ

ಸಂಪುಟ : ೩೮ ಡಿಸೆಂಬರ್ ೨೦೦೨ ಸಂಚಿಕೆ : ೧೨

## ಒಳಪುಟಗಳಲ್ಲಿ.........



| ವಿಳಾಸ : | ಚಂದಾ ವಿವರ : | |
|---|---|---|
| "ಸಂಪಾದಕರು", 'ಸಿದ್ಧಗಂಗಾ' ಮಾಸಪತ್ರಿಕೆ | ವಾರ್ಷಿಕ ಚಂದಾ | ರೂ. ೧೦೦/– |
| ಶ್ರೀ ಸಿದ್ಧಗಂಗಾ ಮಠ, | ಆಜೀವ ಸದಸ್ಯತ್ವ | ರೂ. ೫೦೦/– |
| ತುಮಕೂರು ಜಿಲ್ಲೆ – ೫೭೨ ೧೦೪ | ಬಿಡಿ ಪ್ರತಿ | ರೂ. ೧೦.೦೦ |



## ಜೀವನ ಮೌಲ್ಯಗಳ ದರ್ಶನ.......

ಮೊನ್ನೆ ಗ್ರಾಮವೊಂದರಲ್ಲಿ ಗ್ರಾಮಾಂತರ ಬಸವ ಜಯಂತಿ ಸಮಾರಂಭ ನಡೆದ ಸಂದರ್ಭ. ಸಹಸ್ರ ಸಂಖ್ಯೆಯ ಜನಸಾಗರ. ಗ್ರಾಮ ಜೀವನದ ಸಡಗರ ಸಂಭ್ರಮಗಳ ದೃಶ್ಯ. ವಿಶಾಲವಾದ ವೇದಿಕೆ. ವೇದಿಕೆಯ ಮೇಲೆಲ್ಲ ಕುರ್ಚಿಗಳು. ಕಾಲಿಡಲು ಜಾಗವಿಲ್ಲದಷ್ಟು ಗಣ್ಯರು, ಮಾನ್ಯರು, ಆಹ್ವಾನಿತ ಅತಿಥಿಗಳು ಕುಳಿತಿದ್ದ ಸಂದರ್ಭ. ಸನ್ಮಾನ, ಸತ್ಕಾರಗಳ ಕಾರ್ಯಕ್ರಮ. ಯಾರು ಯಾರನ್ನು ಏತಕ್ಕಾಗಿ ಸನ್ಮಾನಿಸುತ್ತಿದ್ದಾರೆಂಬುದೇ ತಿಳಿಯದಂತೆ ನಡೆದೇ ಹೋಯಿತು. ಫೋಟೋದವರ, ವಿಡಿಯೋದವರ ಹಾವಳಿ, ನಿರೂಪಕರ ಅಪಕ್ವ ತಿಳಿವಳಿಕೆಯ ಅವಾಂತರ. ಆದರೂ ಪ್ರೇಕ್ಷಕರ ಸಹಕಾರ, ಸಹನೆ ಮೆಚ್ಚುವಂತಹುದು. ನಿರೂಪಕರು ಅತಿಥಿಗಳ ಘನತೆ ಗೌರವಗಳನ್ನು ತಿಳಿಯದೆ ಭಾಷಣಕ್ಕೆ ನಿಗದಿಗೊಳಿಸುತ್ತಿದ್ದ ಕಾಲಮಿತಿ. ಬೆಂಗಳೂರಿನಿಂದ ಆಹ್ವಾನಿತರಾಗಿದ್ದ ಪ್ರಸಿದ್ಧ ನ್ಯಾಯಮೂರ್ತಿಗಳಿಗೆ ಮಾತಾಡಲು ನೀಡಿದ ಕಾಲ ಐದು ನಿಮಿಷ. ಇವೆಲ್ಲವುಗಳ ಮಧ್ಯೆಯೂ ಅತಿಥಿಗಳೆಲ್ಲರ ನುಡಿಗಳಲ್ಲಿ ಕಂಡು ಬಂದ ಕಳಕಳಿ: ಜೀವನ ಮೌಲ್ಯಗಳ ದರ್ಶನ.

ಸಮಾರಂಭದಲ್ಲಿ ಗಣ್ಯರೊಬ್ಬರು ಮಾತನಾಡುತ್ತ ''ಇಷ್ಟೆಲ್ಲಾ ಧಾರ್ಮಿಕ ಸಮಾರಂಭಗಳು ನಡೆಯುತ್ತಿವೆ. ಪೂಜ್ಯಶ್ರೀಗಳವರ ಆಶೀರ್ವಚನ ಕೇಳುತ್ತೇವೆ. ಬಸವ ಜಯಂತಿಯನ್ನು ಆಚರಿಸುತ್ತೇವೆ. ಆ ಮಹಾನುಭಾವನ ಸಂದೇಶ ಆಲಿಸುತ್ತೇವೆ. ಇಷ್ಟಾಗಿಯೂ ನಾವೇಕೆ ಇನ್ನೂ ಸುಧಾರಿಸುತ್ತಿಲ್ಲ. ಇದೊಂದು ಬಿಡಿಸಲಾರದ ಒಗಟಾಗಿದೆ'' ಎಂದರು. ಅವರ ಕಳಕಳಿಯಲ್ಲಿ ನೋವಿತ್ತು. ಆತ್ಮಪರೀಕ್ಷೆಯಿತ್ತು. ಅಸಹಾಯಕತೆ ಕಾಣುತ್ತಿತ್ತು. ಅವರಿಗೂ ಮುಂಚೆ ಮಾತನಾಡಿದ್ದ ನ್ಯಾಯಧೀಶರು ಹೇಳಿದ್ದರು. ಬಸವಣ್ಣನವರ ಜಯಂತಿಯೆಂದರೆ ಉತ್ಸವಗಳಲ್ಲ, ಮಾತುಗಳಲ್ಲ ಅವರ ತತ್ವಗಳ ಆಚರಣೆ ಎಂಬುದಾಗಿ.

ಪೂಜ್ಯ ಶ್ರೀಗಳವರು ಕಣ್ಮುಚ್ಚಿ ಕುಳಿತಿದ್ದೂ ಎಲ್ಲರ ನುಡಿಗಳನ್ನೂ ಕೇಳುತ್ತಿದ್ದರು. ಮನದೊಳಗೆ ಚಿಂತನ-ಮಂಥನ ನಡೆಸಿದ್ದರು. ಆಶೀರ್ವಚನಕ್ಕೆ ಪ್ರಾರಂಭಿಸಿದರು. ಗಂಭೀರವಾದ ವಾಣಿ ನಿರಂತರವಾಗಿ, ನಿರ್ಗಳವಾಗಿ ಹರಿಯಿತು. ''ನಾವೇಕೆ ಸುಧಾರಿಸಿಲ್ಲ''ವೆಂದರೆ ಕೇವಲ ''ಹುತ್ತವ ಬಡಿದಡೆ ಹಾವು ಸಾಯಬಲ್ಲುದೆ''? ಎನ್ನುತ್ತ ನುಡಿಭಕ್ತರಾಗಿರುವ ನಾವೆಲ್ಲ ನಡೆಭವಿಗಳಾಗಿದ್ದೇವೆ. ಮಾತಿನಲ್ಲಿ ಬಸವಾಮೃತವಿದೆ. ಕೃತಿಯಲ್ಲಿನ್ನೂ ವ್ಯಕ್ತವಾಗುತ್ತಿಲ್ಲ. ಅಣ್ಣನವರೇ ಹೇಳಿರುವಂತೆ'' ಎನ್ನನುಡಿಯೊಂದುಪರಿ, ನಡೆಯೊಂದು ಪರಿ''ಯಾಗಿದೆ. ಮುಖಂಡರು ಮೊದಲು ಪ್ರತಿಭಾಸಂಪನ್ನರಾಗಬೇಕು. ಚಾರಿತ್ರ್ಯವಂತರಾಗಬೇಕು. ಪ್ರಜಾಕ್ಷೇಮ ಕಟ್ಟಾಳುಗಳಾಗಬೇಕು. ತಲೆಯ ಮೇಲಿಂದ ನೀರು ಸುರಿದರೆ ಕೆಳಗಿನವರೆಗೆ ನೀರು ಹರಿದು ಕೊಳೆ ಹೋಗುತ್ತದೆ. ದೇಹ ಶುಭ್ರವಾಗುತ್ತದೆ. ದೊಡ್ಡವರ ಮಾತು ಕೃತಿ ಚಿಂತನೆಗಳು ಪರಹಿತ ಕಲ್ಯಾಣನಿರತವಾದಾಗ ಜನಾಂಗದ ಸುಧಾರಣೆ. ಅದಕ್ಕಾಗಿಯೇ ಬಸವಣ್ಣನವರು ''ಕಯ್ಯ ಬೊಹರಿಗೆ, ಮಂಡೆಯ ಮೇಲೆ ಸಿಂಬಿ''ಯನ್ನು ಹೊತ್ತು ನಡೆದರು. ಕೈಯ್ಯಲ್ಲಿ ಪೊರಕೆ, ತಲೆಯ ಮೇಲೊಂದು ಸಿಂಬಿ. ಕೈಯ್ಯಲ್ಲಿರುವ ಪೊರಕೆಯಿಂದ ಕಸವನ್ನು ಗುಡಿಸಿ, ತಲೆಯ ಮೇಲೆ ಅದನ್ನು ಹೊತ್ತು ಸಾಗಿಸಿದರು. ಇಂದು ನಮಗಿದು ಬೇಕು. ನಮ್ಮ ನಮ್ಮಲ್ಲಿರುವ ಕಸಯುಕ್ತ ಮನಸ್ಸನ್ನು ಸರಿಪಡಿಸಿಕೊಳ್ಳಬೇಕು, ಎಣಿಸಲಾರದಷ್ಟಿರುವ ಮನಸ್ಸಿನ ಕಸವನ್ನು ಹೊತ್ತು ದೂರ ಸಾಗಿಸಬೇಕು. ಯೇಸು, ಪೈಗಂಬರ್, ಬುದ್ಧ, ಆಚಾರ್ಯರು, ಶರಣರು ಮಾಡಿದ್ದು ಈ ಸೇವೆಯನ್ನು. ಅದರಿಂದಲೇ ಅವರಿಂದು ಸ್ಮರಣೀಯರಾಗಿದ್ದಾರೆ. ಬಸವಣ್ಣನವರ ಸಂದೇಶ ಒಂದು ಗ್ರಾಮಕ್ಕೆ, ರಾಜ್ಯಕ್ಕೆ, ದೇಶಕ್ಕೆ ಸೀಮಿತವಾಗುವಂಥದಲ್ಲ. ಅವು ಲೋಕಮಾನ್ಯವಾಗುವಂತೆ ನಮ್ಮ ಆಚರಣೆಗಳಿಂದ ನಾವಿಂದು ಮುನ್ನಡೆಯಬೇಕಾಗಿದೆ ಎಂದು ನುಡಿದರು.

ಹೌದು, ನಾವಿಂದು ಇಂಥ ನುಡಿದೀಪಗಳ ಬೆಳಕಿನತ್ತ ನಡೆಯಬೇಕಾಗಿದೆ. 'ಕರುಣಾಳು ಬಾ ಬೆಳಕೆ ಕೈ ಹಿಡಿದು ನಡೆಸೆನ್ನನು' ಎಂದು ಪ್ರಾರ್ಥಿಸಬೇಕಾಗಿದೆ.

– ಸಂಪಾದಕ







## ಸಮಯ ಪ್ರಜ್ಞೆ

ನೀವು ವಿದ್ಯಾರ್ಥಿಗಳು ಸುಮ್ಮನೆ ಕಾಲಕಳೆಯುತ್ತೀರಿ. ಕಾಲದ ಬೆಲೆಯನ್ನು ನೀವು ತಿಳಿದುಕೊಂಡಿಲ್ಲ. ನೀವೇ ಏಕೆ; ದೊಡ್ಡವರೆನಿಸಿಕೊಂಡಿರುವರೂ ಕಾಲದ ಮಹತ್ವವನ್ನು ಅರಿತಿಲ್ಲ. ಒಮ್ಮೊಮ್ಮೆ ಸಭೆ ಸಮಾರಂಭಗಳಲ್ಲಿ ಭಾಗವಹಿಸಿದ ಸಂದರ್ಭಗಳಲ್ಲಿ ಎಂತಹ ಧರ್ಮಸಂಕಟವಾಗುತ್ತದೆಂದರೆ ಅಲ್ಲಿ ಕಾಲಹರಣವಾಗುತ್ತಿರುವ ಅನುಭವವನ್ನು ಹೇಳುವಂತಿಲ್ಲ, ಹೇಳದಿರುವಂತಿಲ್ಲ. ಗಣ್ಯಮಾನ್ಯರೇ ಔಚಿತ್ಯವನ್ನು ಗಮನಿಸದೆ, ಸನ್ನಿವೇಶ ಸಂದರ್ಭಗಳನ್ನರಿಯದೆ ಉಪಯೋಗವಿಲ್ಲದ ಮಾತುಗಳನ್ನಾಡುತ್ತ ಸಾವಿರಾರು ಮಂದಿಯ ಕಾಲವನ್ನು ಅಪವ್ಯಯಗೊಳಿಸುವುದನ್ನು ಕಂಡಾಗ ವಿಷಾದವೆನಿಸುತ್ತದೆ. ಕಾರ್ಯಕ್ರಮ ವ್ಯವಸ್ಥೆಯನ್ನು ಮಾಡಿದವರಿಗೂ ಸಮಯಪ್ರಜ್ಞೆ ಇರುವುದಿಲ್ಲ. ಸ್ವಾಗತದ ನುಡಿಗಳಿಗಾಗಿ, ಪರಿಚಯದ ಮಾತುಗಳಿಗಾಗಿ, ಮಾಲಾರ್ಪಣೆಗಾಗಿ, ಕಾಲವನ್ನು ಯಥೇಚ್ಛವಾಗಿ ಬಳಸಿಕೊಳ್ಳುವುದರ ಮೂಲಕ ಸಮಾರಂಭದ ಮುಖ್ಯ ಉದ್ದೇಶವನ್ನೇ ಅಪ್ರಧಾನಗೊಳಿಸಿ ಬಿಡುತ್ತಾರೆ. ಮುಖ್ಯ ಅತಿಥಿಗಳ, ಪ್ರಮುಖ ಉಪನ್ಯಾಸದ ಸಮಯವನ್ನು ಕಬಳಿಸಿಬಿಡುತ್ತಾರೆ. ಇನ್ನು ಕಾರ್ಯಕ್ರಮ ನಿರೂಪಕರಂತೂ ವಿಚಿತ್ರವಾಗಿ ನಡೆದುಕೊಳ್ಳುವುದುಂಟು. ಅವರದೇ ಸಮಾರಂಭದ ಉದ್ದಕ್ಕೂ ಮಾತು ಮಾತು ಮಾತು. ಮೊದಲಿಗೆ ಈ ಸಂಪ್ರದಾಯವಿರಲಿಲ್ಲ. ಸಭೆಯ ಅಧ್ಯಕ್ಷತೆಯನ್ನು ವಹಿಸಿದ್ದವರೇ ಕಾರ್ಯಕ್ರಮದ ನಿರೂಪಣೆಯನ್ನು ಮಾಡುತ್ತಿದ್ದರು. ಸಭಿಕರ ಸಹನೆಯನ್ನು ಪರೀಕ್ಷೆಗೊಡ್ಡುವ ಸಂದರ್ಭಗಳೂ ಆಗಾಗ ತಲೆದೋರುತ್ತವೆ.

ಜೀವನದಲ್ಲಿ ಏನೆಲ್ಲವನ್ನೂ ದೃಢಸಂಕಲ್ಪದಿಂದ, ಶ್ರದ್ಧೆಯಿಂದ, ನಿರಂತರ ಪರಿಶ್ರಮದಿಂದ ಸಂಪಾದಿಸಬಹುದು. ಆದರೆ ಕಾಲವನ್ನು ಸಂಪಾದಿಸುವುದಾಗದು. ಕಾಲ ಯಾರನ್ನೂ, ಯಾರ ಪ್ರತಿಷ್ಠೆ ಪ್ರದರ್ಶನಗಳನ್ನೂ ಕಾಯುವುದಿಲ್ಲ. ಅದಕ್ಕೆಂದೇ ಬಸವಣ್ಣನವರು ಹೇಳಿದ್ದು ''ನೆರೆ ಕೆನ್ನೆಗೆ, ತೆರೆ ಗಲ್ಲಕೆ, ಶರೀರ ಗೂಡು ಹೋಗದ ಮುನ್ನ, ಹಲ್ಲು ಹೋಗಿ, ಬೆನ್ನು ಬಾಗಿ, ಕಾಲಮೇಲೆ ಕೈಯನೂರಿ, ಕೋಲಹಿಡಿಯದ ಮುನ್ನ, ಮುಪ್ಪಿಂದೊಪ್ಪವಳಿಯದ ಮುನ್ನ, ಮೃತ್ಯುಮುಟ್ಟದ ಮುನ್ನ ಪೂಜಿಸು ಕೂಡಲಸಂಗಮದೇವನ'' – ಎಂದು. ಕಾಲದ ದರ್ಶನವನ್ನು ಇದಕ್ಕಿಂತ ನಿಚ್ಚಳವಾಗಿ ತೋರಿಸುವುದಾದರೂ ಎಂತು? ಕೂಡಲಸಂಗನ ಪೂಜಿಸುವುದೆಂದರೆ ಕಾಲದ ಸದುಪಯೋಗವನ್ನು ಮಾಡಿಕೊಳ್ಳುವುದು. ಕಾಲದ ಬಗ್ಗೆ ಎಚ್ಚರವಾಗಿದ್ದು. ದುಡಿಯುವುದು ದಿನಗಳುರುಳುತ್ತವೆ, ಆಯುಷ್ಯ ಕಳೆದು ಹೋಗುತ್ತದೆ. ಮತ್ತೆ ಮರಳಿ ಬರುವುದಿಲ್ಲ. ಇದನ್ನು ಅರಿತು ಅಡಿಯಿಡುವುದೇ ಜಾಣತನ. ಇಂದು ನೀವಿಲ್ಲಿಗೆ ಬಂದಿರುವುದು ಓದುವುದಕ್ಕೆ, ಕಲಿಯುವುದಕ್ಕೆ ಅದನ್ನು ಬಿಟ್ಟು ಸುಮ್ಮನೆ ಹರಟೆ ಮಾತುಗಳಲ್ಲಿ, ಅಲ್ಲಿ ಇಲ್ಲಿ ಸುತ್ತಾಡುವುದರಲ್ಲಿ, ಗೊತ್ತುಗುರಿ ಮರೆತು, ತಂದೆ ತಾಯಿಗಳ ಕಷ್ಟವನ್ನು ಕಡೆಗಣಿಸಿ, ಅವರ ತ್ಯಾಗದ ಬೆಲೆಯನ್ನು ತಿಳಿಯದೆ, ಸಂಸ್ಥೆಯ ಸೇವೆಯ ಉದ್ದೇಶವನ್ನೂ ಅರ್ಥಮಾಡಿಕೊಳ್ಳದೆ ಕಾಲಹರಣಮಾಡುವುದು ಆತ್ಮದ್ರೋಹ ಮತ್ತು ದೇಶದ್ರೋಹವಾಗುತ್ತದೆ. ಕಾಲದ ಮತ್ತು ಶ್ರಮದ ಮಹತ್ವವನ್ನರಿಯದೆ ರಾಷ್ಟ್ರವೂ ಕೂಡ ಇಂದು ಸಂಕಷ್ಟವನ್ನೆದುರಿಸುತ್ತಿದೆ. ಕಾಲದ ಬೆಲೆಯನ್ನರಿತಾಗ ಎಲ್ಲವೂ ಸುಂದರ.

❋

ಓಂ



# ಶ್ರೀ ಸಿದ್ಧಲಿಂಗೇಶ್ವರ ವಚನ

*ಪಟ್ಟ ಸಾಲೆಯ ಗದ್ದಗೆಯೊಳಗೆ*
*ಜಗಜಟ್ಟಿಮೂರ್ತಿಯಿವನಾರೈಯ್ಯ?*
*ಕಟ್ಟೆವಡೆಯಿತ್ತು ಜಳ್ಳು ಹಾರಿತ್ತು ಗಟ್ಟಿ ಉಳಿಯಿತ್ತು*
*ಈ ಕಟ್ಟಳೆಯನೇನೆಂಬೆನೋ?*
*ಮಹಾಲಿಂಗಗುರು ಶಿವ ಸಿದ್ದೇಶ್ವರ ಪ್ರಭುವೇ !*

ದೇಹ ಸಕಲ ತತ್ವಗಳಿಗಾಶ್ರಯವಾಗಿದೆ: ದೇಹಮಂದಿರವಾಗಿದೆ. ಆ ಮಂದಿರದಲ್ಲಿ ಹೃದಯವೆಂಬ ಗದ್ದುಗೆಯಿದೆ. ಆ ಗದ್ದುಗೆಯ ಮೇಲೆ ಜಗಜಟ್ಟಿಯೆನಿಸಿರುವ ಪೂಜಾದಿ ಕ್ರಿಯೆಗಳಿಗೆ ಉಪಮಾತೀತನಾದ ಪರಶಿವ ಲಿಂಗವಿದೆ. ಕ್ರಿಯಾಸ್ವರೂಪನಾದ ಶರಣನು ಜ್ಞಾನಗುರುವನ್ನು ಯಾರು ಈ ಜಗಜಟ್ಟಿ ಎಂದು ಕೇಳಿದ್ದಾನೆ. ಜ್ಞಾನೋಪದೇಶ ಪಡೆದ ಶರಣನ ದೇಹಭಾವವೆಂಬ ಕಟ್ಟೆ ಒಡೆದಿದೆ. ಅದರಿಂದಾಗಿ ಅಜ್ಞಾನವೆಂಬ ಜಳ್ಳು ಹಾರಿದೆ. ಸದ್ವಸ್ತುವೆಂಬ ಜ್ಞಾನಗಟ್ಟಿಯಾಗಿ ಉಳಿದಿದೆ.

(ಕೃಪೆ : ಷಟ್‌ಸ್ಥಲಜ್ಞಾನಿ ಸೋಮಶೇಖರ ಶಿವಯೋಗಿ ಕೃತ ತೋಂಟದ ಸಿದ್ದಲಿಂಗೇಶ್ವರನ ಷಟ್‌ಸ್ಥಲ ಜ್ಞಾನಸಾರಮೃತದ ಬೆಡಗಿನ ವಚನ ಟೀಕೆ – ವೀರಶೈವ ಅಧ್ಯಯನ ಸಂಸ್ಥೆ – ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ, ಡಂಬಳ, ಗದಗ)

## ಶ್ರೀವಾಣಿ

ಅಶಿಸ್ತು ಎಲ್ಲಾ ಕಡೆ ವ್ಯಾಪಕವಾಗಿದೆ, ಶಿಸ್ತು ಕಡಿಮೆ. ಅದು ನಮ್ಮ ದೇಶದ ಸಂಸ್ಕೃತಿಗೆ ಕಳಂಕಪ್ರಾಯ. ಮಹೋನ್ನತ ಸ್ಥಾನಗಳಿಸಲು ಮಹತ್ತರ ಸಾಧನೆ ಅಗತ್ಯ. ಯಾವ ಜೀವನದಲ್ಲಿ ಶಿಸ್ತು ಅಗೋಚರ ಅಂಥ ಜೀವನ ಸಾಮಾನ್ಯವಾದ ಜೀವನ, ವ್ಯರ್ಥವಾದ ಜೀವನ.

## ಶ್ರೀ ಸಿದ್ಧಗಂಗಾ ಗುರುಕರುಣಾ ತ್ರಿವಿಧಿ

ಹಿರಿದಾದ ವೃಕ್ಷವೆ ಅತಿಶಯದ ರೂಪವೆ
ಪೃಥ್ವಿಗಿಂಬಾದ ತಣ್ಣೆಳಲೆ। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಿಮ್ಮ ನಿಂದನಿಲವನುಪಮಿಸಬಾರದು
ಸಾವಿರ ಸಾವಿರ ಶುಭದೀಪ। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನೀವು ಮೆಟ್ಟಿದ ಧರೆ ಪರಮ ಪಾವನವಾಯ್ತು
ನೀವು ಮುಟ್ಟಿದ ಕಲ್ಲು ಅರಳಿತು। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಿಮ್ಮ ನೆನಹೇ ನನಗೆ ಸುಖದ ಸಮುದ್ರವು
ನಿಮ್ಮ ದರುಶನ ನನಗೆ ಕಲ್ಯಾಣ। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಿಮ್ಮದರುಶನದಿಂದ ಕರ್ಮಕೋಟಲೆ ಮುಕ್ತ
ನಿಮ್ಮ ಪಾದವಮುಟ್ಟೆ ಕೈಲಾಸ। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಿಮ್ಮ ದಾಸೋಹದ ಘನವ ನೀನೆಂದನಲಿ
ನಿಮ್ಮ ಮನದೆತ್ತರವನೇನೆನಲಿ। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಮಠವಕಟ್ಟಿದರೆಲ್ಲ ಮಹವನರಿಯಲಿಲ್ಲ
ಮಠಮಾನವ್ಯದ ಮಧುವೆನಲಿಲ್ಲ। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನೀವಿತ್ತ ಮನವನು ನಿಮಗರ್ಪಿಸುವೆ ಶಿವನೆ
ನೀವಿತ್ತ ಶಕುತಿಯ ತವ ಪದಕೆ। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಸಹಜ ದಾಸೋಹಿಯೆ ಸತ್ಯ ದಾಸೋಹಿಯೆ
ಸಹಜ ಸುಂದರ ನಿತ್ಯ ದಾಸೋಹಿ। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಬಂದ ಬರವನರಿಯೆ ನಿಂದನಿಲವನರಿಯೆ
ನೀನಡೆಸಿಹ ದಾಸೋಹದ ಅನುವರಿಯೆ। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

– ಹೆಚ್.ವಿ. ವೀರಭದ್ರಯ್ಯ





# ಅಷ್ಟಾವರಣ

– ಟಿ.ಆರ್. ಮಹಾದೇವಯ್ಯ
136, 1ನೇ ಮುಖ್ಯರಸ್ತೆ, 1ನೇ ಅಡ್ಡರಸ್ತೆ
ಜ್ಞಾನಭಾರತಿ 2ನೇ ಹಂತ,
ಬೆಂಗಳೂರು – 560 092.

*ಗುರುಕೃಪೆಯ ಪಡೆದಿಷ್ಟ ಲಿಂಗಪೂಜೆಯ ಮಾಡಿ*
*ಹರುಷದಿಂ ಜಂಗಮಾರ್ಚನಗೈದು ಬಳಿಕ ವರ*
*ಚರಣತೀರ್ಥವ ಕೊಂಡು ಸುಪ್ರಸಾದವನುಂಡು ಚಿದ್‌ಭಸಿತರುದ್ರಾಕ್ಷೆಯಂ*
*ವರಚಿದಂಗಕ್ಕಲಂಕರಿಸಿ ಪಂಚಾಕ್ಷರಿಯ*
*ಸ್ಮರಿಸುವೀ ಪರಿಯೊಳಷ್ಟಾವರಣದಾಚರಣೆ*
*ಶರಣನಲ್ಲದೆ ಹರನಿಗಿಲ್ಲವಾದುದರಿಂದ ಹರನಿಗಿಂದಧಿಕ ಶರಣಂ*
*(ಮೈಲಾರ ಬಸವಲಿಂಗಶರಣರು, ೧.೩೫)*

ಲೋಕದಲ್ಲಿ ಎಲ್ಲ ಧರ್ಮಗಳೂ ತಮ್ಮವೇ ಆದ ಸ್ವರೂಪ ಹಾಗೂ ನೀತಿನಿಯಮಗಳನ್ನು ಹೊಂದಿರುತ್ತದೆ. ಅವು ಆಯಾ ಧರ್ಮಗಳನ್ನು ಅನುಸರಿಸುವವರಿಗೆ ಮಾರ್ಗದರ್ಶಕಗಳಾಗಿರುತ್ತವೆ. ವೀರಶೈವಧರ್ಮದಲ್ಲಿಯೂ ಕೂಡ ಇಂಥ ನಿರ್ದಿಷ್ಟತತ್ವಗಳಿವೆ. ಮನುಷ್ಯನಿಗೆ ಅಂಗ, ಪ್ರಾಣ, ಆತ್ಮಗಳು ಹೇಗೆ ಮುಖ್ಯವಾದವುಗಳೋ ಹಾಗೇ ವೀರಶೈವ ಧರ್ಮಕ್ಕೆ ಅಷ್ಟಾವರಣ, ಪಂಚಾಚಾರ, ಷಟ್‌ಸ್ಥಳಗಳು ಮುಖ್ಯ ತತ್ವಗಳೆನಿಸಿವೆ. ಅದಕ್ಕೇ "ಅಷ್ಟಾವರಣವೇ ಅಂಗ, ಪಂಚಾಚಾರವೇ ಪ್ರಾಣ, ಷಟ್‌ಸ್ಥಲವೇ ಆತ್ಮ" ಎಂಬ ಸಾರ್ಥಕವಾದ ಸುಂದರ ರೂಪಕ ರೂಪು ಗೊಂಡಿದೆ. ಈ ಮೂರರ ಆಚರಣೆಯನ್ನು ಒಟ್ಟುಗೂಡಿಸಿ 'ಸರ್ವಾಚಾರಸಂಪತ್ತು' ಎಂದು ಶಿವಾನುಭವಿಗಳು ಕರೆಯುತ್ತಾರೆ.

ಅಷ್ಟಾವರಣವೆಂದರೆ ಎಂಟು ಆವರಣಗಳು, ಹೊದಿಕೆಗಳು ಎಂದರ್ಥ. ಬ್ರಹ್ಮಾಂಡಧಾರಿಯಾದ ಶಿವನಿಗೆ ಎಂಟು ಆವರಣಗಳಿವೆ. ಅವನು "ವ್ಯೋಮಾರ್ಕೇಂದುಕ್ಷಮಾತ್ಮಾನಲಜಲಪವಮಾನ ಅಷ್ಟಮೂರ್ತಿ ಪ್ರಸಿದ್ಧಂ" (ಗಿರಿಜಾ ಕಲ್ಯಾಣ, ೧-೧) – ಆಕಾಶ, ಸೂರ್ಯ, ಚಂದ್ರ, ಭೂಮಿ, ಆತ್ಮ, ಬೆಂಕಿ, ನೀರು ಮತ್ತು ಗಾಳಿಗಳ ಅಷ್ಟದೇಹಿ. ಹಾಗೆಯೇ ಪಿಂಡಾಂಡಧಾರಿಯಾದ ಅಂಗನಿಗೆ ಅಥವಾ ಜೀವನಿಗೆ ಗುರು, ಲಿಂಗ, ಜಂಗಮ, ವಿಭೂತಿ, ರುದ್ರಾಕ್ಷಿ, ಮಂತ್ರ, ಪಾದೋದಕ, ಪ್ರಸಾದವೆಂಬ ಎಂಟು ಆವರಣಗಳಿವೆ. "ಪೃಥ್ವಿಯೇ ಪ್ರಸಾದ, ಅಪ್ಪುವೇ ಪಾದೋದಕ, ತೇಜವೇ ರುದ್ರಾಕ್ಷಿ ವಾಯುವೇ ವಿಭೂತಿ, ಆಕಾಶವೇ ಮಂತ್ರ, ಸತ್ತೇ ಗುರುವು, ಚಿತ್ತೇ ಲಿಂಗವು, ಆನಂದವೇ ಜಂಗಮ"ವೆಂದೇ ಸಮೀಕರಿಸಬಹುದು (ವೈರಾಗ್ಯ ೨೬೬).

ಹೇಗೆ ದೇಹವಿಲ್ಲದೆ ಸಾಧನೆಗೂ ಅವಕಾಶವಿಲ್ಲವೋ ಹಾಗೇ ಅಷ್ಟಾವರಣವಿಲ್ಲದೆ ಪಂಚಾಚಾರಕ್ಕಾಗಲೀ, ಷಟ್‌ಸ್ಥಲಗಳಿಗಾಗಲೀ ಅವಕಾಶವಿಲ್ಲ. ಯಾವ ಸಾಧನೆಗಾಗಲೀ ಅಂಗ ಅತ್ಯವಶ್ಯಕ. ಧಾರ್ಮಿಕಾಚರಣೆಗೆ ಮೊದಲ ಹೆಜ್ಜೆ ಅಷ್ಟಾವರಣಗಳ ಅರಿವು. ಅಂತೆಯೇ ಇವು ವೀರಶೈವ ಧಾರ್ಮಿಕ ಆಚರಣೆಯಲ್ಲಿ ಮಹತ್ತರ ಅರ್ಥವ್ಯಾಪ್ತಿಯನ್ನು ಪಡೆದಿವೆ. "ಇವು ಸಾಧಕನ ಸುತ್ತ ನೈತಿಕ ಕ್ರಿಯಾಚಾರಗಳ ತಳಹದಿಯಾದ ಭಕ್ತಿ-ಜ್ಞಾನ-ಕರ್ಮಗಳ ಸಮನ್ವಯದ ಗೋಡೆಯನ್ನು ಕಟ್ಟಿ ಅವನ್ನು ರಕ್ಷಿಸುವ ವಜ್ರಕವಚಗಳು" (ಪ್ರಸಾದ, ೩೭೪). ಒಂದು ಮನೆಯ್ನು ಕಟ್ಟಲು ಅನೇಕ ಜನರ ನೆರವುಬೇಕು; ಅನೇಕ ತರತರದ ಸಾಮಾನುಗಳು ಬೇಕು. ಅದರಲ್ಲಿ ಪಾಲ್ಗೊಂಡ ಜನರಲ್ಲಿ, ಬಳಸುವ ಉಪಕರಣಗಳಲ್ಲಿ ವೈವಿಧ್ಯವಿದ್ದರೂ ಅಲ್ಲಿ ಸಾಮರಸ್ಯವೇರ್ಪಟ್ಟು ಸುಂದರವಾದ ಮನೆ ನಿರ್ಮಾಣವಾಗುತ್ತದೆ. ಹಾಗೆಯೇ ನಮ್ಮ ದೇಹವೆಂಬ ಸದ್ಗೃಹ ನಿರ್ಮಾಣವಾಗಲು ಅಷ್ಟಾವರಣಗಳು ಅವಶ್ಯ ಬೇಕೇ ಬೇಕು. ಈ ಉಪಕರಣಗಳನ್ನು ನಿರಾಕರಿಸುವಂತಿಲ್ಲ. ಆಧ್ಯಾತ್ಮ ವಿಕಾಸಕ್ಕೆ ಇವು ಅತ್ಯಗತ್ಯ. ಸರ್ಪಭೂಷಣರು ಹೇಳಿರುವಂತೆ ಭಕ್ತನು *'ಕಾಯ ಕಾಂತಾರವ ಹೊಕ್ಕು ಬೇಂಟೆಯನಾಡಿ ಮಾಯಾ ಮೋಹದ ಮೃಗಗಳ ಕೊಲ್ಲಲು'* (ಕೈವಲ್ಯ, ೭೩-೧೮) ಮತ್ತು *'ಶರೀರವೆಂದೆಂಬುವ ಹೊಲನ ಹಸನಮಾಡಿ ಪರತತ್ವವೆಂಬ ಬೆಳೆಯನೆ ಬೆಳೆದುಣ್ಣಲು'* (ಅದೇ. ೭೭-೨೨), ಅಷ್ಟಾವರಣಗಳು ಪ್ರಥಮ ಸೋಪಾನ.

ಅಷ್ಟಾವರಣಗಳಲ್ಲಿ ಬಾಹ್ಯ ಅಷ್ಟಾವರಣ ಮತ್ತು ಅಂತರಷ್ಟಾವರಣ ಎಂದು ಎರಡು ವಿಧ. ಬಾಹ್ಯ ಅಷ್ಟಾವರಣಗಳು ಕ್ರಿಯೆಗೆ ಸಂಬಂಧಿಸಿದ್ದರೆ, ಅಂತರಷ್ಟಾವರಣಗಳು ಜ್ಞಾನಕ್ಕೆ ಸಂಬಂಧಿಸಿವೆ. ಜ್ಞಾನ-ಕ್ರಿಯೆಗಳ ಸಾಮರಸ್ಯ ವೀರಶೈವಧರ್ಮದ ವೈಶಿಷ್ಟ್ಯ. ಜ್ಞಾನರಹಿತವಾದ ಕ್ರಿಯೆ, ಕ್ರಿಯಾರಹಿತವಾದ ಜ್ಞಾನ ಎರಡೂ ನಿರರ್ಥಕ. ಅದಕ್ಕಾಗಿಯೇ ಅಷ್ಟಾವರಣದಲ್ಲಿ ಈ ಎರಡು ಪ್ರಭೇದಗಳು ಸಾಧುವೆನಿಸಿವೆ.

*ಬಾಹ್ಯ ಅಷ್ಟಾವರಣ :* ಗುರುವೇ ತನು, ಲಿಂಗವೇ ಮನ, ಜಂಗಮವೇ ಪ್ರಾಣ, ಪಾದೋದಕವೇ ನಾಲಿಗೆ, ಪ್ರಸಾದವೇ ಮೂಗು, ವಿಭೂತಿಯೇ ತ್ವಚೆ, ರುದ್ರಾಕ್ಷಿಯೇ ಕಣ್ಣು, ಮಂತ್ರವೇ ಕಿವಿ. ಅಂದರೆ ನಿರ್ಮಲವಾದ ಶರೀರವೇ ಗುರು, ಹರಿದಾಡುವ ಮನಸ್ಸನ್ನು ಇಷ್ಟಲಿಂಗದಲ್ಲಿ ತೊಡಗಿಸಿ ಪೂಜಿಸುವುದರಿಂದ, ಜಂಗಮಸೇವೆಯಿಂದ ಅನ್ನಮಯ ಶರೀರ ಜ್ಞಾನಮಯ ವಾಗುತ್ತದೆ. ಹೀಗೆ ತನು-ಮನ-ಪ್ರಾಣಗಳನ್ನು ಪವಿತ್ರಗೊಳಿಸಿ ಆ

ಭಾವನೆಯಿಂದ ಜಲವನ್ನು ಕುಡಿದರೆ ಅದೇ ಪಾದೋದಕ. ಪವಿತ್ರ ಭಾವನೆಯಿಂದ ಅನ್ನವನ್ನು ಸೇವಿಸಿದರೆ ಅದೇ ಪ್ರಸಾದ. ಪರಸ್ತ್ರೀ, ಪರಧನ, ಪರಸೊತ್ತುಗಳ ಕಡೆಗೆ ಹೋಗುವ ಕಣ್ಣನ್ನು ಇಷ್ಟಲಿಂಗದ ಕಡೆಗೆ ತಿರುಗಿಸಿದರೆ ಆ ಕಣ್ಣೇ ರುದ್ರಾಕ್ಷಿ. ಶರಣರ ವಚನ, ಶಿವಸ್ತೋತ್ರ, ಪಂಚಾಕ್ಷರೀ ಮಂತ್ರಗಳನ್ನೂ ಗುರುಮುಖ ದಿಂದ ಕೇಳಿ ಕಿವಿಯನ್ನು ಪವಿತ್ರವಾಗಿಸುವುದೇ ಮಂತ್ರ.

*ಅಂತರಷ್ಟಾವರಣ* : ಅರಿವೇ ಗುರು, ಆತ್ಮವೇ ಲಿಂಗ, ಸುಜ್ಞಾನವೇ ಜಂಗಮ, ಅಂತಃಕರಣವೇ ಪಾದೋದಕ, ಪ್ರಸನ್ನ ಚಿತ್ತವೇ ಪ್ರಸಾದ, ದೈವೀಸಂಪತ್ತೇ ವಿಭೂತಿ, ಜ್ಞಾನನೇತ್ರವೇ ರುದ್ರಾಕ್ಷಿ, ಪ್ರಣವನಾದವೇ ಮಂತ್ರ. ಇದಕ್ಕೆ ವಿವರಣೆ ಹೀಗಿದೆ : ಬಾಳಿನಲ್ಲಿ ಒಳಿತಾವುದು ಕೆಡುಕಾವುದು ಎಂಬುದನ್ನು ಕಂಡುಕೊಳ್ಳಲು ಮಾರ್ಗದರ್ಶಕವಾಗುವ ವಿವೇಕವೇ ಗುರು; ದೇಹ, ಇಂದ್ರಿಯ, ಮನಸ್ಸುಗಳಿಂದ ಭಿನ್ನವಾದ ಶಕ್ತಿಸ್ವರೂಪವೇ ಲಿಂಗ, ಅಂಗನು ಲಿಂಗದಲ್ಲಿ ಬೆರೆವ ಸ್ಥಿತಿಯ ಸುಜ್ಞಾನವೇ ಜಂಗಮ; ಸಕಲಜೀವಿಗಳಲ್ಲಿ ದಯೆ ತೋರಿ, ಲೇಸ ಬಯಸುವ ವಿಶ್ವಪ್ರೇಮದ ಅಂತಃಕರಣವೇ ಪಾದೋದಕ; ಸದಾ ಮನಸ್ಸನ್ನು ಸಮಸ್ಥಿತಿಯಲ್ಲಿಟ್ಟುಕೊಂಡು ಪ್ರಸನ್ನವಾದ ಚಿತ್ತವುಳ್ಳುದೇ ಪ್ರಸಾದ; ಮನುಷ್ಯ ತನ್ನ ದುರ್ಗುಣಗಳ್ನು ಹೋಗಲಾಡಿಸಿಕೊಂಡು ದೈವೀ ಗುಣಗಳನ್ನು ಹೆಚ್ಚಿಸಿಕೊಳ್ಳುವುದೇ ವಿಭೂತಿ; ಮಾಯೆ ಮುಸುಗಿ ತಾನಾರು ತನ್ನ ಉದ್ಧಾರ ಮಾರ್ಗವಾವುದು – ಎಂಬುದು ತಿಳಿಯದೆ ಮೂಢನಾಗಿರುವಾಗ ಸುಜ್ಞಾನವನ್ನು ಒದಗಿಸುವುದೇ ರುದ್ರಾಕ್ಷಿ ಅಥವಾ ಜ್ಞಾನನೇತ್ರ; ಪ್ರಣಪಂಚಾಕ್ಷರಿಯ ಪಠಣದಿಂದ ದೇವರಲ್ಲಿ ಒಂದಾಗುವ ಹಂತವೇ ಮಂತ್ರ'' (ವೈರಾಗ್ಯ, ೨೬೭).

ಅಷ್ಟಾವರಣಗಳಲ್ಲಿ ಗುರು, ಲಿಂಗ, ಜಂಗಮ – ಇವರು ಪೂಜಾಮೂರ್ತಿಗಳು; ವಿಭೂತಿ, ರುದ್ರಾಕ್ಷಿ ಮಂತ್ರ – ಇವು ಪೂಜಾಸಾಧನೆಗಳು; ಪಾದೋದಕ, ಪ್ರಸಾದಗಳು ಸಿದ್ಧಿರೂಪವಾದ ಪೂಜಾಫಲಗಳು. ಇದು ವೀರಶೈವ ದರ್ಶನಕಾರರ ವೈಜ್ಞಾನಿಕ ದೃಷ್ಟಿಗೆ ನಿದರ್ಶನ. ಅವ್ಯಕ್ತಕ್ಕೆ ವ್ಯಕ್ತರೂಪವನ್ನು ಕೊಟ್ಟು ಆಚರಣೆಗೆ ಯೋಗ್ಯವಾದ ತತ್ವನಿರೂಪಣೆಯನ್ನು ಮಾಡುವಲ್ಲಿ ಅವರು ತೋರಿರುವ ಕ್ರಮ ತಲೆದೂಗುವಂತಿದೆ. ಇತರ ಧರ್ಮಗಳಲ್ಲಿಯೂ ಈ ಬಗೆಯ ಉಪಾಸ್ಯದೇವತೆ ಉಪಾಸನಾ ಸಾಮಗ್ರಿಗಳು ಉಪಾಸನಾ ಫಲಗಳು ಇದ್ದರೂ, ವೀರಶೈವ ಧರ್ಮದಲ್ಲಿ ಅವುಗಳ ಸ್ವರೂಪ ಮತ್ತು ಪ್ರಯೋಜನಗಳನ್ನು ವಿಶಿಷ್ಟ ರೀತಿಯಲ್ಲಿ ಪ್ರತಿಪಾದಿಸಲಾಗಿದೆ. ಪ್ರತಿಯೊಬ್ಬ ವೀರಶೈವನೂ ಅಷ್ಟಾವರಣಯುಕ್ತನಾಗಿಯೇ ಬಾಳಬೇಕು. ಇದು ಸಮಾಜದಲ್ಲಿರುವ ಧಾರ್ಮಿಕ ಸುವ್ಯವಸ್ಥೆ. ವೀರಶೈವ ತನ್ನ ತನು ಮನಧನಗಳನ್ನು ಗುರುಲಿಂಗ ಜಂಗಮರಿಗೆ ನೀಡಿ ಕ್ರಮಬದ್ಧವಾದ ಆಚರಣೆಯಲ್ಲಿ ತೊಡಗಿ ಭಗವದನುಗ್ರಹರೂಪವಾದ ಪ್ರಸಾದವನ್ನು ಉಪಭೋಗಿಸಬೇಕೆನ್ನುವುದು ಈ ಕಟ್ಟಳೆಯ ಸದುದ್ದೇಶ. ಏಕೆಂದರೆ 'ಭಕ್ತನು ಗುರುವು ಹೇಳಿದ ಆಚಾರಕ್ಕೆ ತನ್ನ ತನುವನ್ನು ಅರ್ಪಿಸಿದರೆ ಅಂದರೆ ಅದನ್ನು ಆಚರಿಸಿದರೆ ತನು ಶುದ್ಧವಾಗುವುದು; ಲಿಂಗಪೂಜೆ, ಧ್ಯಾನಗಳಿಗೆ ಮನಸ್ಸನ್ನು ಅರ್ಪಿಸಿದರೆ ಮನಸ್ಸು ಶುದ್ಧವಾಗುವುದು; ಜಂಗಮಕ್ಕೆ ತನ್ನದು ಎಂಬ ಮಮಕಾರವನ್ನು ಉಂಟುಮಾಡುವ ಹಣ ಮೊದಲಾದವನ್ನು ಅರ್ಪಿಸಿ, ಅವನ್ನು ಅವರ ಪ್ರಸಾದವೆಂದು ಸ್ವೀಕರಿಸುವುದರಿಂದ ಆತ್ಮ ಶುದ್ಧವಾಗುವುದು' (ಅಷ್ಟಾವಿ. ೧೭). ಗುರುಲಿಂಗ ಜಂಗಮ – ಇವು ಮೂವರೂ ಒಂದೇ ವಸ್ತುವಿನಿಂದಾದವರು. ಈ ಮೂರರಲ್ಲಿ ಭೇದವಿಲ್ಲ. 'ಗುರುವೆಂಬ ತೈಲ, ಲಿಂಗವೆಂಬ ಬತ್ತಿ, ಜಂಗಮವೆಂಬ ಜ್ಯೋತಿ' ಎಂಬ ರೂಪಕ ಈ ಮೂವರ ಸಂಬಂಧವನ್ನು ಸೂಚಿಸುತ್ತದೆ. ಅದಕ್ಕೇ ಸಿದ್ಧರಾಮೇಶ್ವರರು *'ಗುರುವಾಗಿ ಬಂದನೆಗೆ ದೀಕ್ಷೆಯ ನೀಡಿದಿರಿ, ಲಿಂಗವಾಗಿ ಬಂದೆನ್ನ ಮನದ ಮಲಿನವ ಕಳೆದಿರಿ, ಜಂಗಮವಾಗಿ ಬಂದೆನ್ನ ಪ್ರಪಂಚತನವ ಕಳೆದು ಪರಮಸೀಮೆಯ ಮಾಡಿದಿರಿ'* (ಸಿದ್ಧ ವ. ೪೧೪) ಎಂದಿರು ವುದು. ಸರ್ವಜ್ಞನೂ ಕೂಡ 'ಗುರು-ಲಿಂಗ- ಜಂಗಮವು ಹರನೊಲಿದ ರೂಪೆಂದು ಅರಿದು ನಿಶ್ಚಯಿಸಿ ನಡೆಯುವಾ ಭಕ್ತಂಗೆ ಪರಮಪದವಹುದು' (ಸರ್ವಜ್ಞ. ೧೨೪) ಎಂದಿದ್ದಾನೆ. ಆದ್ದರಿಂದಲೇ ವೀರಶೈವರು ಈ ಮೂವರು ಉಪಾಸನಾ ಮೂರ್ತಿಗಳನ್ನುಳಿದು ಅನ್ಯರನ್ನು ಪೂಜಿಸಬಾರದು.

ವಿಭೂತಿ, ರುದ್ರಾಕ್ಷಿ ಮಂತ್ರಗಳು ವೀರಶೈವರ ಪೂಜಾಸಾಧನಗಳು. ವಿಭೂತಿ, ರುದ್ರಾಕ್ಷಿಗಳನ್ನು ಧರಿಸಿಕೊಂಡು ಮಂತ್ರಪೂರ್ವಕವಾಗಿ ಗುರುಲಿಂಗಜಂಗಮರನ್ನು ಉಪಾಸಿಸಬೇಕು. ಇವೆಲ್ಲವೂ ಶಿವನ ಚಿಹ್ನೆಗಳೇ. ಶಿವನ ತೇಜಸ್ಸೇ ವಿಭೂತಿ, ಶಿವನ ನೇತ್ರವೇ ರುದ್ರಾಕ್ಷಿ, ಶಿವನ ನಾಮವೇ ಮಂತ್ರ. ಗುರುವಿನ ಅನುಗ್ರಹದಿಂದ 'ಅಂಗಗುಣ' ಅಳಿದು 'ಲಿಂಗಗುಣ' ಅಳವಟ್ಟ ಭಕ್ತನು ಪ್ರತಿನಿತ್ಯವೂ ತಪ್ಪದೆ ಈ ಪೂಜಾಸಾಧನಗಳಿಂದ ಆರಾಧನೆ ಮಾಡಬೇಕು.

ಶಿವನು ಗುರುಲಿಂಗಜಂಗಮರೂಪನಾದ ತನ್ನನ್ನು ಪೂಜಿಸುವ ವೀರಶೈವರಿಗೆ ದಯೆಯಿಂದ ಅನುಗ್ರಹಿಸುವ ಫಲಗಳೇ ಪಾದೋದಕ, ಪ್ರಸಾದಗಳು. ಪ್ರಸಾದವೆಂದರೆ ಶಿವನ ಪ್ರಸನ್ನತೆ, ಶಿವನ ದಯಾಮಯವಾದ ಚಿದ್ರಸವೇ ಪಾದೋದಕ. ಇವುಗಳ ಸೇವನೆಯಿಂದ ಭಕ್ತನ ತನುಕರಣಾದಿಗಳು ಶುದ್ಧವಾಗಿ, ಅವನು ಪ್ರಸಾದಕಾಯನಾಗುವನು.

ಇನ್ನು ಈ, ಅಷ್ಟಾವರಣಗಳನ್ನು ಕುರಿತು ನಮ್ಮ ಕವಿಗಳು, ಶರಣರು, ಅನುಭಾವಿಗಳು ಹೇಳಿರುವ ಮಾತುಗಳ ಮೂಲಕ ಬಿಡಿಯಾಗಿ ಹೆಚ್ಚು ವಿವರಗಳನ್ನು ತಿಳಿಲು ಪ್ರಯತ್ನಿಸೋಣ :

*ಗುರು*

*ಗುರುಬ್ರಹ್ಮಾ ಗುರುರ್ವಿಷ್ಣುಃ ಗುರುರ್ದೇವೋ ಮಹೇಶ್ವರಃ ।*
*ಗುರುಸ್ಸಾಕ್ಷಾತ್ ಪರಂ ಬ್ರಹ್ಮ ತಸ್ಮೈ ಶ್ರೀಗುರುವೇ ನಮಃ ॥*
*ಗುರುವೆನಲು ಕೊರೆವುದು ಜನನ ಮರಣದ ಬೇರ ನೋಡಾ*
*ಗುರುವೆನಲು ಸುಡುವುದು ಭವಾರಣ್ಯವ ನೋಡಾ*
*ಗುರುವೆನಲು ಕಡಿವುದು ಭವಕುಜಲತೆಗಳ ನೋಡಾ*
*ಇಂತಪ್ಪ ಸದ್‌ಗುರುದೇವಂಗೆ ನಮೋ ನಮಃ ಎಂಬೆನಯ್ಯಾ*

(ಅಖಂಡೇ. ೧೭.೨)





ಸಮಾಜದಲ್ಲಿ ಗುರು ಒಬ್ಬ ಪೂಜ್ಯ ವ್ಯಕ್ತಿ. 'ಗುರು' ಶಬ್ದಕ್ಕೆ ಆಚಾರ್ಯ, ದೇಶಿಕ, ಆರಾಧ್ಯ ಎಂಬುವು ಪರ್ಯಾಯ ನಾಮಗಳು. ಅಷ್ಟಾವರಣದಲ್ಲಿ ಗುರುವಿಗೆ ಪ್ರಥಮಸ್ಥಾನ ಸಂದಿದೆ. ಜೀವನದಲ್ಲಿ ಸುಮಾರ್ಗ ಯಾವುದು? ಸದಾಚಾರವಾವುದು ಎಂಬುದನ್ನು ತೋರಿಸಿ, ಭಕ್ತನ ಆತ್ಮೋದ್ಧಾರಮಾಡುವ ಮಹಾನ್ ಶಕ್ತಿಯೆಂದರೆ ಗುರು. ಗುರುಕರುಣವಿಲ್ಲದೆ ಆತ್ಮವಿಕಾಸವಾಗದು. 'ಅರಿತರೆ ಶರಣ, ಮರೆತರೆ ಮಾನವ' ಎಂಬ ಶರಣರ ಉಕ್ತಿಯಂತೆ ಮನುಷ್ಯನಿಗೆ ಅರಿವು ನೀಡಿ, ಶರಣರನ್ನಾಗಿಸುವ ಗುರು ಅವನಿಗೆ ಮುಕ್ತಿಮಾರ್ಗವನ್ನು ಕರುಣಿಸುತ್ತಾನೆ. 'ನ ಗುರೋರಧಿಕಂ ನಾಸ್ತಿ ನಾಸ್ತಿ ತತ್ವಂ ಗುರೋಃ ಪರಂ' ಎಂಬ ಆಗಮವಾಕ್ಯವು ಗುರುವಿನ ಹಿರಿಮೆಗೆ ನಿದರ್ಶನ. ಗುರುವು ಶಿಷ್ಯನಿಗೆ ಶಿವದೀಕ್ಷಾ ಸಂಸ್ಕಾರ ಪೂರ್ವಕ ಅವನ ಅರಿವಿನ ಕುರುಹಾಗಿ ಇಷ್ಟಲಿಂಗಧಾರಣೆಮಾಡಿ ಅವನ 'ಅಂಗಗುಣ'ಗಳನ್ನು ಕಳೆದು 'ಲಿಂಗಗುಣ'ಗಳು ಅಳವಡುವಂತೆ ಮಾಡುತ್ತಾನೆ. 'ಗುರುವು ತ್ರಿಕರಣಗಳಲ್ಲಿರುವ ತ್ರಿಮಲ ಗಳನ್ನು ತೊಳೆಯುವ ತಿಳಿಜಲ' (ಅಷ್ಟಾವಿ. ೨೨).

ಹುಟ್ಟಿನಿಂದ ಸಾಯುವವರೆಗೆ ಗುರುವಿನ ಅಗತ್ಯವಿದ್ದೇ ಇರುತ್ತದೆ. ಮೊದಲು ಪ್ರಕೃತಿ ಗುರುವಾಗಿ ಸ್ವಾಭಾವಿಕ ಅಂಗಚೇಷ್ಟೆಗಳನ್ನು ಕಲಿಸುತ್ತದೆ. ಅನಂತರ ತಾಯಿ ಗುರುವಾಗಿ ಹಾಲೂಡಿ ಬೆಳೆಸಿ ಮಾತು ಕಲಿಸುತ್ತಾಳೆ. ಅನಂತರ ತಂದೆಯು ಗುರುವಾಗಿ ಕೆಲಸವನ್ನು ಕಲಿಸುತ್ತಾನೆ. ಬಳಿಕ ಶಿಕ್ಷಕನು ಗುರುವಾಗಿ ಬುದ್ಧಿ ಬೆಳೆಸುತ್ತಾನೆ. ಕೊನೆಗೆ ಆಧ್ಯಾತ್ಮಗುರುವು ಆತ್ಮೋದ್ಧಾರದ ಮಾರ್ಗವನ್ನರುಹುತ್ತಾನೆ. ಗುರುವಿಗೆ ಹೋಲಿಸಲು ತಕ್ಕ ವಸ್ತುಗಳೇ ಇಲ್ಲ. ಸ್ಪರ್ಶಶಿಲೆಯೂ ಅವನ ಮುಂದೆ ಮಸಕು. ಕಾರಣ, ಸ್ಪರ್ಶಶಿಲೆಯು ತನ್ನನ್ನು ಮುಟ್ಟಿದ ಇತರ ಲೋಹಗಳನ್ನು ಚಿನ್ನವಾಗಿಸುತ್ತದೆ. ಆದರೆ ಚಿನ್ನವಾದ ಲೋಹಕ್ಕೆ 'ಹೊನ್ನಾಗಿಸುವ ಶಕ್ತಿ' ಬರುವುದಿಲ್ಲ. ಆದರೆ ಶ್ರೀಗುರು ಮುಟ್ಟಿದ ಶಿಷ್ಯ ಶ್ರೀಗುರುವೇ ಆಗುವುದಲ್ಲದೆ, ತನ್ನ ಬಳಿ ಸಂದವರನ್ನೂ ತನ್ನಂತೆಯೇ ಪವಿತ್ರಾತ್ಮರನ್ನಾಗಿಸುತ್ತಾನೆ. ಆದ್ದರಿಂದ ಗುರು ಕರುಣೆ ಅನಾದೃಶವಾದದ್ದು (ಅಷ್ಟಾವ ೨೧). ಶ್ರೀಗುರು ಭಕ್ತನಿಗೆ ಇಷ್ಟಲಿಂಗಧಾರಣೆ ಮಾಡುವ ಕ್ರಮವನ್ನು ಬಸವಲಿಂಗ ಶರಣರು ಒಂದೇ ಪದ್ಯದಲ್ಲಿ ಬಹಳ ಸಾರವತ್ತಾಗಿ ಹೇಳಿದ್ದಾರೆ :

*ಪಾವನಾತ್ಮಕಸುಪುತ್ರನ ಮಸ್ತಕದೊಳು ಗುರು-*
*ದೇವ ಕರವಾಂತು ಸಾಸಿರದಳದ ಚಿತ್‌ಕಳೆಯ*
*ಭಾವದಿಂ ಮನ ಮನದಿ ನೇತ್ರ, ನೇತ್ರಂಗಳಿಂ ತೆಗೆದಿಷ್ಟರೂಪಗೊಳಿಸಿ*
*ತೀವಿ ತಚ್ಛಿಷ್ಯನಂಗದ ಮೇಲೆ ಧರಿಸಿ ಸಂ-*
*ಜೀವ ಷಣ್ಮಂತ್ರಲಿಂಗವಿದೆಂದು ತಿಳುಹೆ ಚಿದ್-*
*ಭಾವಕಳೆಯೊಳಗಿಷ್ಟಲಿಂಗವೇ ತಾನಾದ ಲಿಂಗಭಕ್ತನೇ ಶ್ರೇಷ್ಠನು*

(ಮೈಲಾರ. ೧-೪)

ಗುರುಕರಣೆಯಿಂದ ಕೃತಾರ್ಥರಾದ ಶರಣರು ಅವನನ್ನು ಬಗೆಬಗೆಯಾಗಿ ಕೊಂಡಾಡಿದ್ದಾರೆ : 'ಶಿವಪಥವರಿವಡೆ ಗುರು ಪಥವೇ ಮೊದಲು' (ಬಸವ. ೭೦), 'ಗುರುಪಥವ ಮೀರಿ ಮಾಡುವ ನೇಮ ಸಲ್ಲದು ಸಲ್ಲದು' (ಬಸವ. ೭೭) ಎಂದು ಬಸವಣ್ಣನವರೂ, 'ನರಜನ್ಮವ ತೊಡೆದು ಹರಜನ್ಮವ ಮಾಡಿದ ಗುರುವೆ... ಮಲ್ಲಿಕಾರ್ಜುನನ ತಂದೆನ್ನ ಕೈವಶಕ್ಕೆ ಕೊಟ್ಟ ಗುರುವೆ' (ಮಹಾದೇ. ೪೩), 'ಇಂತು ಮುಂದೆ ತೋರಿ ಹಿಂದೆ ಬಿಡಿಸಿದ ಶ್ರೀಗುರುಸಾನ್ನಿಧ್ಯದಿಂದಾನು ಬದುಕಿದೆನಯ್ಯಾ' (ಮಹಾದೇ. ೨೦೧) ಎಂದು ಮಹಾದೇವಿಯಕ್ಕನವರೂ, 'ಭವತಿಮಿರವೆಂಬ ಅಜ್ಞಾನದಿಂದ ಮುಸುಕಿಕೊಂಡು ಕಾಣಬಾರದೆ ಇದ್ದ ಕಣ್ಣಿಗೆ ಜ್ಞಾನವೆಂಬ ಅಂಜನವನೆಚ್ಚಿ ಶಿವಪಥವಿದೆಂದು ತೋರಿಸಿದ ಸದ್ಗುರು ದೇವಂಗೆ ನಮೋ ಎಂಬೆನಯ್ಯ' (ಸಿದ್ದೇಶ್ವ. ೧೫೮) ಎಂದು ತೋಂಟದ ಸಿದ್ಧಲಿಂಗೇಶ್ವರರೂ ನಮನವನ್ನು ಸಲ್ಲಿಸಿದ್ದಾರೆ. ಗುರುವು ದೇವರಿಗಿಂತ ದೊಡ್ಡವನೆಂದು ಅಭಿಪ್ರಾಯ ಪಡುವ ಕನ್ನಡದ ಗಂಡುಕವಿ ಸರ್ವಜ್ಞ ಹೀಗೆನ್ನುತ್ತಾನೆ

*ಗುರುವಿಂಗೆ ದೈವಕ್ಕೆ ಹಿರಿದು ಅಂತರವುಂಟು*
*ಗುರುವು ತೋರ್ವ ದೈವದೆಡೆಗಳನ್ನು ದೈವತಾ*
*ಗುರುವ ತೋರುವುದೆ?*

(ಸರ್ವಜ್ಞ. ೩೭)

ನಿಜಗುಣರು ತಮಗೆ ಗುರುವಿನ ಅನುಗ್ರಹದಿಂದ ಉಂಟಾದ ಜ್ಞಾನೋದಯವನ್ನು ರಮ್ಯವಾಗಿ ಹೀಗೆ ಹೇಳಿದ್ದಾರೆ : ''ತಿಳಿಯಲೆನ್ನಯ ಸುಕೃತದುದಯ ಗಿರಿಯಗ್ರದೊಳು ಬೆಳಗಿ ದೋರಲು ಗುರುದಯಾದಿವಾಕರನು ಘಳಿಲಜ್ಞಾನ ತಮವಿರದಡಗೆ ...'' (ವೇದಾಂತ. ೪೫). ಸರ್ಪಭೂಷಣರು ಗುರುವಿಗೆ ತಮ್ಮ ಕೃತಜ್ಞತೆಗಳನ್ನು ಸಲ್ಲಿಸುತ್ತಾ, 'ಗುರುದೇವ ನೀ ಮಾಡುದುಪಕೃತಿಯನು ನಾನು ಮರೆಯುವುದೆಂದೆಂದಿಗಿಹ ದೊಳು.... ಗುರುರೂಪದಿಂದೆನ್ನ ಬೋಧಿಸಿ ತನ್ನೊಳು ಬೆರಸುತ್ತ ಮೋಕ್ಷವಿತ್ತುದರಿಂದೆ' (ಕೈವಲ್ಯ. ೯೪) ಎಂದಿದ್ದಾರೆ.

ಇಂಥ ಸದ್ಗುರುವಿಗೆ ನಮೋ ನಮಃ

*ಎನ್ನ ಕರಕಮಲಮಧ್ಯದಲ್ಲಿ ಪರಮನಿರಂಜನದ ಕುರುಹ ತೋರಿದ*
*ಆ ಕುರುಹಿನ ಮಧ್ಯದಲ್ಲಿ ಅರುಹಿನ ಕಳೆಯ ತೋರಿದ*
*ಆ ಕಳೆಯ ಮಧ್ಯದಲ್ಲಿ ಮಹಾಜ್ಞಾನದ ಬೆಳಗ ತೋರಿದ*
*ಆ ಬೆಳಗಿನ ನಿಲವಿನೊಳಗೆ ಎನ್ನ ತೋರಿದ*
*ಎನ್ನೊಳಗೆ ಎನ್ನಿಂಬಿಟ್ಟುಕೊಂಡ ಮಹಾಗುರುವಿಂಗೆ*
*ನಮೋ ನಮಃ ಎನುತಿರ್ದೆನಯ್ಯಾ*

(ಅಖಂಡೇ. ೨೩-೨೧)

*ಲಿಂಗ*

*ಲಿಂಗಸ್ಯ ಧಾರಣಂ ಪುಣ್ಯಂ ಸರ್ವಪಾಪಪ್ರಣಾಶನಮ್ ।*
*ಆದೃತಂ ಮುನಿಭಿಃ ಸರ್ವೈಗಮಾರ್ಥವಿಶಾರದೈಃ ॥*

(ಸಿದ್ಧಾಂತ. ೨೬-೨೮)

*ಲಿಂಗಸ್ಯ ದರ್ಶನಂ ಪುಣ್ಯಂ, ದರ್ಶನಾತ್ ಸ್ಪರ್ಶನಂ ಶುಭಂ*
*– ಅಂತಪ್ಪ ಶಿವಲಿಂಗವನು ಹೆರೆಹಿಂಗದೆ ಅಂಗದ ಮೇಲೆ*
*ನಿರಂತರ ಧರಿಸಿಕೊಂಡಿಪ್ಪಾತನೆ ಎಲ್ಲರಿಂದಧಿಕ ನೋಡಾ*
(ಅಖಂಡೇ. ೨೬-೩)

ಲಿಂಗವು ಪರಬ್ರಹ್ಮಸೂಚಕ. ಅದು ಅರಿವಿನ ಕುರುಹು; ಹೃದಯದಲ್ಲಿ ಬೆಳಗುವ ಜ್ಯೋತಿ; ಮಹಾಜ್ಞಾನದ ಬೆಳಕು. ಅದಕ್ಕೇ ಇಷ್ಟಲಿಂಗವನ್ನು 'ಕರಸ್ಥಲದ ಪರಬ್ರಹ್ಮ' ಎನ್ನುತ್ತಾರೆ. 'ಎತ್ತನೇರಿ ಎತ್ತನರಸುವಂತೆ, ತಾನಿರ್ದು ತನ್ನರಸಿಕೊಳ್ಳುವಂತೆ' (ಆದವ. ೧೦೪) ಇದ್ದ ಅಜ್ಞಾನಿ ಶಿಷ್ಯನಿಗೆ ನಿಜವ ಅರಿಯುವಂತೆ ಗುರುವು ಲಿಂಗಧಾರಣೆ ಮಾಡಿಸುತ್ತಾನೆ. ಇಷ್ಟಲಿಂಗಪೂಜೆ ವೀರಶೈವರ ವೈಶಿಷ್ಟ್ಯ. ಇಷ್ಟ ಲಿಂಘಧಾರಣವು ಬಹಳ ಮಹತ್ವದ ವಿಷಯ. ''ಇದು ಭಕ್ತನ 'ಅಂಗಗುಣ'ಗಳು ಅಳಿದು 'ಲಿಂಗ ಗುಣ'ಗಳು ಅಳವಡುವ ಸಾಧನ. ದೀಕ್ಷಾಕಾಲದಲ್ಲಿ ಶ್ರೀಗುರುವು ಶಿಷ್ಯನ ಸ್ಥೂಲ, ಸೂಕ್ಷ್ಮ, ಕಾರಣತನುಗಳನ್ನು ಸಂಸ್ಕರಿಸಿ ಅವುಗಳಲ್ಲಿ ಕ್ರಮವಾಗಿ ಇಷ್ಟಲಿಂಗ, ಪ್ರಾಣಲಿಂಗ ಮತ್ತು ಭಾವಲಿಂಗಗಳನ್ನು ಅನುಗೊಳಿಸುತ್ತಾನೆ. ಸಾಧಕನ ಸೌಕರ್ಯಕ್ಕಾಗಿ ವೀರಶೈವ ಧರ್ಮದ ಶಾಸ್ತ್ರಾರರು ಲಿಂಗತತ್ತ್ವವನ್ನು ಬಹಳ ಸೂಕ್ಷ್ಮರೀತಿಯಿಂದ ವಿವೇಚನೆ ಮಾಡಿದ್ದಾರೆ. ವೀರಶೈವರ ಕ್ರಿಯಾಪ್ರಧಾನವಾದ ಅಷ್ಟಾವರಣದಲ್ಲಿ ಜ್ಞಾನ ಪ್ರಧಾನವಾದ ಷಟ್ಸ್ಥಲಗಳ ಅನುಸಂಧಾನ ಸೌಕರ್ಯಕ್ಕಾಗಿ ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗ ಮತ್ತು ಮಹಾಲಿಂಗವೆಂಬ ಆರು ನಾಮಗಳಿಂದ ವಿಕಾಸಗೊಳಿಸಲಾಗಿದೆ' (ವೀಸಾ ಇ. ೧೭೨).

ಚಂಚಲ ಮನಸ್ಸನ್ನು ದೃಢವಾಗಿ ನಿಲ್ಲಿಸಲು ದೃಷ್ಟಿಯ ಸಹಕಾರ ಬೇಕು. ದೃಷ್ಟಿಯನ್ನು ಒಂದು ಕಡೆ ನಿಲ್ಲಿಸಲು ಒಂದು ಕುರುಹು ಬೇಕು. ಆ ಪವಿತ್ರ ಕುರುಹೇ ಇಷ್ಟಲಿಂಗ. ಆದ್ದರಿಂದ ಮಾನವ ಅಂತರ್ಮುಖಿಯಾಗಲು ಇಷ್ಟಲಿಂಗ ಒಳ್ಳೆಯ ಸಾಧನ ವಾಗುತ್ತದೆ. ಈ ಲಿಂಗದ ಮಹತ್ವವನ್ನು ಕುರಿತು *'ಜಗದಗಲ ಮುಗಿಲಗಲ ಮಿಗೆಯಗಲ ನಿಮ್ಮಗಲ, ಪಾತಾಳದಿಂದತ್ತತ್ತ ನಿಮ್ಮ ಶ್ರೀಚರಣ, ಬ್ರಹ್ಮಾಂಡದಿಂದತ್ತತ್ತ ನಿಮ್ಮ ಶ್ರೀಮಕುಟ, ಅಗಮ್ಯ ಅಗೋಚರ ಅಪ್ರತಿಮಲಿಂಗವೆ. ಕೂಡಲಸಂಗಮದೇವಯ್ಯಾ, ಎನ್ನ ಕರಸ್ಥಲಕ್ಕೆ ಬಂದು ಚುಳುಕಾದಿರಯ್ಯ'* (ಬಸವ. ೭೪೩) ಎನ್ನುತ್ತಾರೆ ಬಸವಣ್ಣನವರು, ಇಂಥ ಮಹಿಮ್ಮಾನ್ವಿತ ಇಷ್ಟಲಿಂಗವನ್ನು ಬರೀ ಧರಿಸಿದರೆ ಸಾಲದು, ಪ್ರತಿದಿನವೂ ತಪ್ಪದೆ ಕ್ರಮವರಿತು ಪೂಜಿಸಬೇಕು. ಅದಕ್ಕೇ ಪ್ರಭುದೇವರು, 'ಹೊಟ್ಟೆಯ ಮೇಲೆ ಕಟ್ಟೋಗರದ ಮೊಟ್ಟೆಯ ಕಟ್ಟಿದರೇನು, ಹಸಿವು ಹೋಹುದೆ? ಅಂಗದ ಮೇಲೆ ಲಿಂಗ ಸ್ವಾಯುತವಾದರೇನು, ಭಕ್ತನಾಗಬಲ್ಲನೇ' (ಅವಚಂ. ೧೭೯) ಎಂದು ಪ್ರಶ್ನಿಸಿದ್ದಾರೆ.

ಲಿಂಗಮಹತ್ವವನ್ನು ಅರಿತೇ ಸಿದ್ಧರಾಮೇಶ್ವರರು, *'ಕರಿಯು ಕನ್ನಡಿಯೊಳಡಗಿ ಉರಿಯು ಕಾಷ್ಠದೊಳಡಗಿ ಶರಧಿಯೊಳು ವಾಲಿಕಲ್ಲಡಗಿದಂತೆ। ಪರಮಚಿದ್ಘನಲಿಂಗವೆನ್ನ ಕರದೊಳಡಗಿ। ಪರಿಭವವ ತಪ್ಪಿಸಿದೆ ಯೋಗಿನಾಥ'* (ಅಷ್ಟಾತ್ರಿ. ೬೦) ಎಂದೂ, *'ಅಂಗದ ಮೇಲೆ ಲಿಂಗವಿಲ್ಲದನ್ನಕ್ಕರ ಪ್ರಾಣದಲ್ಲಿ ಲಿಂಗಪರಿಣಾಮವನ್ನೆದುವ ಪರಿ ಎಂತಯ್ಯಾ. ಅಂಗತ್ರಯವುಳ್ಳವರು ಲಿಂಗತ್ರಯ ಸಂಪನ್ನರಾಗಬೇಕು'* (ಚನ್ನವ. ೨೪೬) ಎಂದು ಚನ್ನಬಸವೇಶ್ವರರೂ, *'ಲಿಂಗದಲ್ಲಿ ಮನವಾಗಿ, ಲಿಂಗದಲಿ ನೆನಹಾಗಿ। ಲಿಂಗದಲಿ ನೋಟ ನುಡಿಕೂಟವಾದವನು। ಲಿಂಗವೇ ಅಕ್ಕು* (ಸರ್ವಜ್ಞ೧೨೦) ಎಂದು ಸರ್ವಜ್ಞನೂ ಹೇಳಿರುವುದು. ಸರ್ಪಭೂಷಣರು ಲಿಂಗಪೂಜೆಯ ಸಂಭ್ರಮವನ್ನು, ಪ್ರಾಣಲಿಂಗ ಪೂಜೆಯ ಸುಳುಹನ್ನು ತಮ್ಮ ಹಾಡೊಂದರಲ್ಲಿ ಅನುಭವ ರಸಾಯನವಾಗಿಸಿ ಉಣಬಡಿಸಿದ್ದಾರೆ :

*ಲಿಂಗಪೂಜೆಯ ಮಾಡಿರೊ। ನಿಮ್ಮೊಳೆ ಪ್ರಾಣ-*
*ಲಿಂಗಪೂಜೆಯ ಮಾಡಿರೋ ॥*
*ವರಭಕ್ತಿಜಲವ ನೀಡಿ ಮಿರುಗುವಕ್ಷತೆಯನಿಟ್ಟು*
*ಅರಿವೆಂಬ ನಿರ್ಮಲ ಸರಸಪುಷ್ಪವ ಸೂಡಿ*
*ಹರುಷವೆಂಬುವ ಧೂಪವ ಸಮರ್ಪಿಸಿ ...*

(ಕೈವಲ್ಯ. ೧೦೧-೨೯)

ಹೀಗೆ ಪೂಜಿಸಿದ ಫಲವು ಹೇಗಿರುತ್ತದೆ? 'ದೇವರ ಪೂಜಿಸಿ ನದಿಯೊಳಗೆ ನದಿ ಬೆರತಂತಾಗಬೇಕು' (ಬಸವ. ೯೨೯).

ದೇಹದ ಮೇಲೆ ಇಷ್ಟಲಿಂಗವನ್ನು ಧರಿಸಿದ ಮೇಲೆ ಅನ್ಯದೈವಗಳಿಗೆರಗಲಾಗದು. ಸ್ಥಾವರಲಿಂಗಕ್ಕೆ ಶರಣು ಹೋಗುವುದು ವೀರಶೈವಧರ್ಮಕ್ಕೆ ವಿರೋಧ. ಅದನ್ನು ಶರಣರು ಪ್ರತಿಭಟಿಸಿ ನುಡಿದಿದ್ದಾರೆ. 'ಲಿಂಗವ ಪೂಜಿಸಿ ಮರಳಿ ದೈವಕ್ಕೆರಗಿದಡೆ ಕೂಡಲಸಂಗಮದೇವ ಹಲ್ಲ ಕಳೆವ' (ಬಸವ. ೬೪೯). 'ಬೆಟ್ಟದ ಲಿಂಗವ ಒಡಿದು ಮಾಡಿ ಕಂಡು ಪರಿವಕೊಟ್ಟ ಮೂಳರಿರಾ ಬಿಟ್ಟುಕೊಡಿ ನಿಮ್ಮ ಇಷ್ಟಲಿಂಗವ' (ಅಂಬಿವ. ೧೨೫). 'ಇಷ್ಟಲಿಂಗವಿದ್ದಂತೆ ಸ್ಥಾವರ ಲಿಂಗಕ್ಕೆ ಶರಣೆಂದೆನಾದಡೆ ತಡೆಯದೆ ಹುಟ್ಟಿಸುವುದು ಶ್ವಾನನ ಗರ್ಭದಲ್ಲಿ... ಗುರು ಕೊಟ್ಟಲಿಂಗದಲ್ಲಿ ಎಲ್ಲ ತೀರ್ಥಂಗಳೂ, ಎಲ್ಲ ಕ್ಷೇತ್ರಂಗಳೂ ಇದ್ದಾವೆಂದು ತಿಳಿದು ಮುಕ್ತರಪ್ಪುದಯ್ಯಾ (ಆದವ. ೭೪).

ಇಂಥ ಮಹಿಮಾಸ್ಪದ ಲಿಂಗಕ್ಕೆ ಮಣಿಯುತ್ತಾ ಮೊಗ್ಗೆಯ ಮಾಯಿದೇವರ ವಾಣಿಯನ್ನಾಲಿಸೋಣ :

*ಲಿಂಗದೊಳಿರ್ದು ಲಿಂಗಮನೆ ತಾಳ್ದು ನಿರಂತರ ಲಿಂಗಪೂಜೆಯಂ*
*ಲಿಂಗದಿನೊಲ್ದು ವಿಸ್ತರಿಸೆ ಲಿಂಗಕ್ಕೆ ಅಂಗಮನರ್ಪಿಸುತ್ತಮಾ*
*ಲಿಂಗಪದಾರ್ಥಮಂ ಸವಿದು ಲಿಂಗಸುಖಾಸ್ಪದನಾಗಿ ರಾಜಿಪಂ*
*ಲಿಂಗನಿಜೈಕ್ಯನಯ್ಯ ಪರಮಪ್ರಭುವೆ ಮಹದೈಪುರೀಶ್ವರಾ.*

(ಶತಕ: iii, ೫೬)

*(ಮುಂದುವರೆಯುತ್ತದೆ)*





# ಮಠದಿಂದ ಬಸವ ಕಲ್ಯಾಣಕ್ಕೆ

– ಹೆಚ್.ವಿ. ವೀರಭದ್ರಯ್ಯ
ಸಂಪಾದಕರು,
ಸಿದ್ಧಗಂಗಾ ಮಾಸಪತ್ರಿಕೆ

ದಿನಾಂಕ ೪-೧೧-೨೦೦೨ರಂದು ಸಂಜೆ ನಾಲ್ಕು ಘಂಟೆಗೆ ನಮ್ಮ ಬಸ್ಸು, ಲಾರಿ, ಟ್ರಕ್ಕುಗಳು ಶ್ರೀಮಠದಿಂದ ಬೀದರ್ ಜಿಲ್ಲೆಯಲ್ಲಿರುವ ಬಸವಕಲ್ಯಾಣಭಿಮುಖವಾಗಿ ಹೊರಟವು. ತುಮಕೂರಿನಲ್ಲಿ ನಾಟಕತಂಡದ ವಾದ್ಯಗೋಷ್ಠಿಯವರನ್ನು ಹಾಗೂ ಕೆಲವು ಕಲಾವಿದರನ್ನು ಬಸ್ಸಿಗೆ ಹತ್ತಿಸಿಕೊಂಡು ಮುಂದೆ ಸಾಗಿದೆವು. ಎಲ್ಲರ ಮುಖದಲ್ಲಿ, ಮನದಲ್ಲಿ ಉತ್ಸಾಹ, ಉಲ್ಲಾಸಗಳು. ಬಸವಣ್ಣನವರು ಬಾಳಿದ, ಬೆಳಗಿದ, ಲೋಕದೀಪಕನಾದ ಪುಣ್ಯಭೂಮಿಯಲ್ಲಿ ಅವನ ಜೀವನಕಥೆಯನ್ನು ದೃಶ್ಯಮಾಧ್ಯಮದಲ್ಲಿ ಎಂಟುನೂರೈವತ್ತು ವರ್ಷಗಳಾದ ಮೇಲೆ ಕಲ್ಯಾಣದ ಮತ್ತು ಸುತ್ತಮುತ್ತಿನ ಬಸವಾಭಿಮಾನಿಗಳಿಗೆ ಪ್ರದರ್ಶಿಸುವ ಅಪೂರ್ವ ಗಳಿಗೆ ಒದಗಿಬಂದಿತಲ್ಲಾ ಎಂಬ ಆನಂದ ಎಲ್ಲರಿಗೂ. ಸಂಗೀತ ನಿರ್ದೇಶಕರಾದ ವಿದ್ವಾನ್ ಶ್ರೀ ಕೆ.ಎನ್. ವೆಂಕಟರಾಮಯ್ಯನವರಂತೂ ''ಜೀವನ ಸಾರ್ಥಕವಾಯಿತು, ಪರಮಪೂಜ್ಯ ಶ್ರೀ ಶ್ರೀಗಳವರ ಸಂಕಲ್ಪ ಪವಿತ್ರವಾಯಿತು. ನನಗೆ ಬಸವಣ್ಣ ಬೇರೆಯಲ್ಲ, ಮಹಾಸ್ವಾಮಿಗಳು ಬೇರೆಯಲ್ಲ'' – ಎಂದರು. ಕಲಾವಿದರಲ್ಲಿ ಶಿಕ್ಷಕರು, ವಿದ್ಯಾರ್ಥಿಗಳು ಬಸವಣ್ಣನವರು ಕಟ್ಟಿ ಬೆಳೆಸಿದ ಕಲ್ಯಾಣ ಹೇಗಿದ್ದಿರಬಹುದು? ಹೇಗಾಗಿರಬಹುದು? ಎಂಬ ಕುತೂಹಲ. ನಮ್ಮ ಬಸ್ಸು, ಲಾರಿ, ಟ್ರಕ್ಕುಗಳ ಸಾರಥಿಗಳು ಸರದಾರರು ಒಬ್ಬರನ್ನು ಒಬ್ಬರು ಹಿಂದಕ್ಕೆ ಹಾಕಿ ಹೋಗಬೇಕೆಂಬ ಉತ್ಸಾಹಿಗಳು. ಆದರೆ ಮ್ಯಾನೇಜರ್ ಶ್ರೀ ಪಿ.ಎನ್. ಚಂದ್ರಶೇಖರಯ್ಯನವರ ಎಚ್ಚರಿಕೆಯ ಕಡಿವಾಣ. ಕಲಾವಿದರ ರಕ್ಷಣೆಯ ಹೊಣೆಗಾರಿಕೆ. ಶಿರಾ, ಹಿರಿಯೂರು, ಚಿತ್ರದುರ್ಗ ದಾಟಿ ರಾಷ್ಟ್ರೀಯ ಹೆದ್ದಾರಿ ೧೩ರಲ್ಲಿ ಹೊಸಪೇಟೆಯತ್ತ ಮುಂದುವರಿದೆವು. ರಾತ್ರಿ ಒಂಬತ್ತಾಯಿತು. ಎಲ್ಲರಿಗೂ ಹೊಟ್ಟೆಯ ಚಿಂತೆ. ಹಸಿವು, ತೃಷೆ, ನಿದ್ದೆ ಗೆಲ್ಲಲು ನಾವೇನು ಪೂಜ್ಯ ಶ್ರೀ ಶಿವಕುಮಾರ ಸ್ವಾಮಿಗಳಲ್ಲವಲ್ಲ? ಅವರೂ ಆ ಎಲ್ಲವನ್ನು ಗೆದ್ದವರು, ಧರೆಗೆ ದೊಡ್ಡವರು. ಒಬ್ಬೊಬ್ಬರಾಗಿ ಊಟಕೊಡುವುದರ ಬಗ್ಗೆ ಮಾತೆತ್ತಿದವು. ಮ್ಯಾನೇಜರರತ್ತ ಎಲ್ಲರ ಕಿವಿ, ಕಣ್ಣು, ಮ್ಯಾನೇಜರರಿಗೂ ಹಸಿವಾಗದಿರುತ್ತದೆಯೇ? ರಾಷ್ಟ್ರೀಯ ಹೆದ್ದಾರಿ ೩ರಲ್ಲಿ, ಗೌರಮ್ಮನ ಹಳ್ಳಿಯ ಬಳಿ, ಮಿಣುಕುತ್ತಿದ್ದ ಬೀದಿದೀಪಗಳ ಮಬ್ಬು ಬೆಳಕಿನಲ್ಲಿ ವಾಹನಗಳಿಂದ ಕೆಳಗಿಳಿದೆವು. ಶ್ರೀಮಠದಿಂದ ತಂದಿದ್ದ ಅನ್ನ ಮತ್ತು ಗೊಜ್ಜುಗಳ ಪ್ರಸಾದವನ್ನು ಯಥಾಶಕ್ತಿ ತೆಗೆದುಕೊಂಡೆವು. ತೃಪ್ತಿಯ ತೇಗುಗಳಿಂದ ಸಂಗೀತದ ಹೊಸ ಸ್ವರರಾಗಗಳನ್ನು ಹೊರಡಿಸುತ್ತ ವಾಹನಗಳನ್ನೇರಿ ಹೊಸಪೇಟೆಯತ್ತ ಹೊರಟೆವು. ಹೊಟ್ಟೆತುಂಬ ಪ್ರಸಾದ ಬಿದ್ದಿತ್ತು. ಬಸ್ಸು ತೊಟ್ಟಿಲು ತೂಗುತ್ತಿತ್ತು. ಕಣ್ಣುಗಳು ಮುಚ್ಚುತ್ತ ಬಂದವು. ಒಬ್ಬೊಬ್ಬರೂ ಒಂದೊಂದು ನಿದ್ರಾಸನಯೋಗ ಮುದ್ರಿತರಾಗಿ ಪಯಣಿಸಿದೆವು. ಕಣ್ಣುಬಿಟ್ಟಾಗ ಹೊಸಪೇಟೆ ದಾಟಿ ಸುರಪುರದಲ್ಲಿದ್ದುದು ಗೊತ್ತಾಯಿತು. ಅಂದು ದೀಪಾವಳಿ. ಮನೆಮನೆಯ ಮುಂದೆ, ಅಂಗಡಿಮುಂಗಟ್ಟುಗಳಲ್ಲಿ ದೀಪಗಳು ನಗುತ್ತಿದ್ದ ನೋಟ. ಮನಸ್ಸಿಗೆ ಮುದವನ್ನಿತ್ತಿತು. ಗುಲ್ಬರ್ಗ ಸೇರಿದಾಗ ದಿನಾಂಕ ೫-೧೧-೨೦೦೨ರ ಹಗಲು ಹನ್ನೆರಡು ಗಂಟೆ. ಶರಣಬಸವೇಶ್ವರ ಮಠದಲ್ಲಿ ಸ್ನಾನ, ಪೂಜೆ, ತಿಂಡಿ ಮುಗಿಸಿ ಕಲ್ಯಾಣದ ಕಡೆಗೆ ಮುಖಮಾಡಿದಾಗ ಮಧ್ಯಾಹ್ನವಾಯಿತು. ಶರಣಬಸವೇಶ್ವರಮಠದ ದೇವಾಲಯ ಅಂದರೆ ಗದ್ದುಗೆ ತುಂಬ ಸುಂದರವಾಗಿದೆ. ಭಕ್ತಾದಿಗಳಿಂದ ತುಂಬಿತ್ತು. ಲಿಂಗೈಕ್ಯ ಪೂಜ್ಯಶ್ರೀ ದೊಡ್ಡಪ್ಪ ಅಪ್ಪನವರ ಗದ್ದುಗೆ ನವೀಕರಣವಾಗುತ್ತದೆ ಶ್ರೀಮಠದ ಇತಿಹಾಸದಲ್ಲಿ ಸುವರ್ಣಯುಗವನ್ನು ಸ್ಥಾಪನೆಮಾಡಿದ ಪುಣ್ಯಪುರುಷರವರು. ಈಗ ಪೀಠಾಧಿಪತಿಗಳಾಗಿರುವ ಪೂಜ್ಯ ಶ್ರೀ ಶರಣಬಸಪ್ಪ ಅಪ್ಪ ಅವರು ನಮ್ಮನ್ನೆಲ್ಲಾ ಪ್ರೀತಿಯಿಂದ ಕಂಡರು. ಮನಸ್ಸಿನ ತುಂಬಾ ಶರಣರ ಸೇವೆಯನ್ನೇ ಮೆಲುಕು ಹಾಕುತ್ತ ಸಾಗಿದೆವು. ಕಲ್ಯಾಣವನ್ನು ಕಾಣುತ್ತಲೆ ಪುಳಕಗೊಂಡೆವು. ಅನುಭವಮಂಟಪವನ್ನು ತಲುಪಿದಾಗ ಸಂಜೆ ನಾಲ್ಕುಗಂಟೆ. ಎಲ್ಲರಿಗೂ ರೊಟ್ಟಿ ಪಲ್ಯ, ಅನ್ನಸಾರಿನ ಪ್ರಸಾದ ಲಭ್ಯವಾಯಿತು. ಊಟಮಾಡಿ ಹೊರಡುತ್ತಿದ್ದಂತೆಯೇ ಪರಮಪೂಜ್ಯ ಶ್ರೀ ಶ್ರೀಗಳವರು ದಯಮಾಡಿಸಿದರು. ಶ್ರೀಗಳವರು ೫-೧೧-೨೦೦೨ರ ಪ್ರಾತಃಕಾಲ ಆರು ಘಂಟೆಗೆ ಶ್ರೀ ಸಿದ್ಧಗಂಗಾಮಠದಿಂದ ಹೊರಟು ಸೊಲ್ಲಾಪುರದ

ಮಾರ್ಗವಾಗಿ ಕಲ್ಯಾಣಕ್ಕೆ ಏಳುನೂರೈವತ್ತು ಕಿ.ಮೀ. ಕ್ರಮಿಸಿ ಬಂದಿದ್ದರು. ಶ್ರೀಗಳವರಿಗೀಗ ತೊಂಬತ್ತೈದು ತುಂಬುತ್ತಿದೆ. ಆದಾಗ್ಯೂ ಬಸವನಿಷ್ಠರಾದ ಪೂಜ್ಯರು ಆಯಾಸವನ್ನು ಲೆಕ್ಕಿಸದೆ ಪ್ರಯಾಣಮಾಡಿ ಬಂದಿದ್ದರು. ಪ್ರಿಯವಾದ ಚಿಂತನೆಗಳಲ್ಲಿ ಮನಸ್ಸು ತುಂಬಿಬರುವಾಗ ದೇಹವೂ ಆಯಾಸವನ್ನು ಕಾಣಲಾರದು. ನಮ್ಮನ್ನು, ಕಲಾತಂಡದವರನ್ನು ಪಟ್ಟಣದೊಳಗಿರುವ ಬಸವೇಶ್ವರರ ದೇವಾಲಯಕ್ಕೆ ಕರೆದುಕೊಂಡು ಹೋದರು. ವಿಶ್ರಮಿಸಿಕೊಳ್ಳಲು ವ್ಯವಸ್ಥೆಮಾಡಿದರು. ದೇವಾಲಯ ವಿಶಾಲವಾಗಿದೆ. ಆವರಣವನ್ನು ಸ್ವಚ್ಛವಾಗಿಟ್ಟುಕೊಂಡಿದ್ದಾರೆ. ದೇವಾಲಯದ ಗೋಡೆಗಳ ಮೇಲೆ ಶರಣರ ರೂಪಚಿತ್ರಗಳನ್ನು ಬರೆಸಿದ್ದಾರೆ. ಬಸವೇಶ್ವರರ ಶಿಲಾಮೂರ್ತಿ ಸುಂದರವಾಗಿದೆ. ನಿತ್ಯಪೂಜಾದಿ ಕಾರ್ಯಗಳು ನಡೆಯುತ್ತವೆ. ಆವರಣದಲ್ಲಿ ನೀರಿನ ನಲ್ಲಿಯಿದೆ. ವರ್ಷಕ್ಕೊಮ್ಮೆ ಜಾತ್ರೆಯೂ ಜರುಗುತ್ತದೆ. ಗುಡಿಯ ಹೊರಭಾಗದಲ್ಲಿ ಸುತ್ತೆಲ್ಲ ಮುಸ್ಲಿಂ ಕುಟುಂಬಗಳಿವೆ. ಅಲ್ಲಿಂದಲೇ ಬಿಜ್ಜಳನ ಕೋಟೆಯನ್ನು ನೋಡಬಹುದು. ಸಂಜೆ ಆರುಘಂಟೆಯಾಯಿತು. ಕಲಾವಿದರೆಲ್ಲ ಮತ್ತೆ ನಾಟಕ ಪ್ರದರ್ಶನ ನೀಡಬೇಕಿದ್ದ ಅನುಭವಮಂಟಪದ ಸ್ಥಳಕ್ಕೆ ಹೊರಟೆವು. ದಾರಿಯಲ್ಲಿಯೇ ತ್ರಿಪುರಾಂತನ ಕೆರೆ ಕಾಣಸುತ್ತದೆ. ಸಮಾರಂಭ-ಶರಣ ಕಮ್ಮಟ ೨೩ನೆಯ ವರ್ಷದ್ದು ಪ್ರಾರಂಭವಾಗಿತ್ತು. ವಿಶಾಲವಾದ, ಎತ್ತರವಾದ ಬಯಲು. ತುಂಬೆಲ್ಲ ಬಣ್ಣದ ಬಟ್ಟೆಯಹಂದರ (ಶ್ಯಾಮಿಯಾನ) ಸಾವಿರಾರು ಕುರ್ಚಿಗಳು ಎದ್ದು ಕಾಣುವ ವೇದಿಕೆ. ವೇದಿಕೆಯ ಮೇಲೆ ಹುಲಸೂರು ಪೂಜ್ಯ ಶ್ರೀ ಶಿವಾನಂದಸ್ವಾಮಿಗಳು, ಕೊಟ್ಟೂರು ಹೊಸಪೇಟೆ ಪೂಜ್ಯ ಶ್ರೀ ಸಂಗನ ಬಸವಸ್ವಾಮಿಗಳು, ಹಾರಕೂಡದ ಪೂಜ್ಯ ಶ್ರೀ ಚನ್ನವೀರ ಶಿವಾಚಾರ್ಯಸ್ವಾಮಿಗಳು, ಶರಣ ಶ್ರೀ ವಿ. ಸಿದ್ಧರಾಮಣ್ಣನವರು, ಶರಣ ಶ್ರೀ ಸಿದ್ಧರಾಮ ಬೆಲ್ದಾಳರು, ಪರಮಪೂಜ್ಯ ಶ್ರೀ ಶ್ರೀಗಳವರು ಆಸೀನರಾಗಿದ್ದರು. ಬಸವ ತತ್ವಪ್ರೇಮಿಗಳು ಆಸಕ್ತಿಯಿಂದ ಕಾರ್ಯಕ್ರಮದಲ್ಲಿ ತಲ್ಲೀನರಾಗಿದ್ದರು.

ಶರಣ ಕಮ್ಮಟದ ಉದ್ಘಾಟನೆ ಹಾಗೂ ಚಿನ್ಮಯಿ ಬಸವಣ್ಣನವರ ಆ ಸಮಾರಂಭದ ಉದ್ಘಾಟನೆಯನ್ನು ಜ್ಯೋತಿ ಬೆಳಗಿಸುವುದರ ಮೂಲಕ ನೆರವೇರಿಸಿದ ಸಿದ್ಧಗಂಗಾ ಪೂಜ್ಯ ಶ್ರೀಗಳು *"ಜಗತ್ತಿಗೇ ಹೊಸಬೆಳಕನ್ನು, ಸಂದೇಶವನ್ನು ನೀಡಿದ್ದ ಕಲ್ಯಾಣ. ಎಂದೆಂದಿಗೂ ಪ್ರಸ್ತುವಾಗುವಂತಹ ಕಾಯಕ-ದಾಸೋಹ-ಅಸ್ಪೃಶ್ಯತಾ ನಿವಾರಣೆ- ಮಾನವೀಯತೆಗಳ ಸಾಕ್ಷಾತ್ಕಾರ ಸಕ್ಷದರ್ಶನಮಾಡಿಸಿದ ಬಸವಾದಿ ಶರಣರು ಕಟ್ಟಿದ ಕಲ್ಯಾಣ ಇಂದು ಪುನರ್ ನಿರ್ಮಾಣವಾಗಬೇಕಾಗಿದೆ. ನಾಡಿನೆಲ್ಲ ಮಠಾಧೀಶರು, ಸಮಾಜ ಗಣ್ಯರು, ಬುದ್ಧಿ ಜೀವಿಗಳು. ರಾಜಕಾರಣಿಗಳು ಒಂದೆಡೆ ಕಲೆತು ಸುದೀರ್ಘವಾಗಿ ಸಮಾಲೋಚನೆಮಾಡಿ ಕಲ್ಯಾಣವನ್ನು ಕಟ್ಟಬೇಕಾದ ಅಗತ್ಯ ಇದೆ. ಆದಕ್ಕೆ ಬೇಕಾಗಿರುವುದು ಅಭಿಮಾನ"* – ಎಂಬುದಾಗಿ ನುಡಿದಾಗ ಸಭೆ ಚಪ್ಪಾಳೆಯ ಮೂಲಕ ಶ್ರೀಗಳವರ ಅಭಿಪ್ರಾಯವನ್ನು ಸ್ವಾಗತಿಸಿತು. ಪೂಜ್ಯಶ್ರೀ ಸಂಗನ ಬಸವಸ್ವಾಮಿಗಳು ಪ್ರತಿವರ್ಷ ನಡೆಯುವ ಶರಣ ಕಮ್ಮಟದ ದಾಸೋಹ ಕೈಂಕರ್ಯ ತಮಗಿರಲಿ ಎಂದು ಆಶೀರ್ವಚನ ನೀಡಿದರು.

ರಾತ್ರಿ ೮-೪೦ಕ್ಕೆ 'ಶ್ರೀ ಜಗಜ್ಯೋತಿ ಬಸವೇಶ್ವರ ನಾಟಕ' ಪ್ರಾರಂಭವಾಯಿತು. ಸಾವಿರಾರು ಬಸವತತ್ವಾಭಿಮಾನಿಗಳ ಜನಸಾಗರದ ಮನದಲೆಯ ಮೇಲೆ ನಾಟಕ ನೌಕೆ ತೇಲಿತು. ನಿಶ್ಶಬ್ದ ಪ್ರಶಾಂತ ಪರಿಸರ. ಬಸವಣ್ಣನವರ ವಚನಗಳ ಮಧುರ ಸಂಗೀತ, ನಾಟಕದ ಎಂಬತ್ತು ದೃಶ್ಯಗಳು ಐವತ್ತೆರಡು ಕಲಾವಿದರ, ಆರು ಜನ ವಾದ್ಯಮೇಳದವರ, ಇಪ್ಪತ್ಮೂರು ಮಿತ್ರರಿಂದ ಕಟ್ಟಿದ ರಂಗಸಜ್ಜಿಕೆಯಲ್ಲಿ, ಇಬ್ಬರು ಬೆಳಕನ್ನು ಚೆಲ್ಲುತ್ತಾ ಹೋದಂತೆ, ಇಬ್ಬರು ಧ್ವನಿಸಹಕಾರ ನೀಡುತ್ತಾ ಬಂದಾಗ ಬಸವಣ್ಣನವರ ಬಾಳು ಅರಳುತ್ತಾ ಪ್ರೇಕ್ಷಕರ ಹೃದಯಾನುಭವಮಂಟಪದಲ್ಲಿ ಶರಣಸಂದೇಶದ ಕಂಪನ್ನು ಸೂಸುತ್ತಾ ಬೆಳಗಿನ ೫-೪೦ರವರೆಗೆ ಪ್ರದರ್ಶಿತವಾಯಿತು. ಜನಮುಗ್ಧವಾಗಿ ಹೋದರು. ಹರಳಯ್ಯ, ಕಲ್ಯಾಣಿ, ಬಸವಣ್ಣ, ಪ್ರಭುದೇವರ ಪಾದಮುಟ್ಟಿ ನಮಸ್ಕರಿಸಿದವರೆಷ್ಟೊಂದು ಮಂದಿ! ಅವರಿಗೆ ಆ ಎಲ್ಲ ಬೆಳಕಿನ ಚೇತನಗಳನ್ನೇ ಕಣ್ಣಾರೆ ಕಂಡ ಹಿಗ್ಗು!

ದಿನಾಂಕ ೬-೧೧-೨೦೦೭ರಂದು ಬೆಳಗ್ಗೆ ಕಲ್ಯಾಣದಲ್ಲಿ ನೋಡಬೇಕಾಗಿದ್ದ ಪ್ರೇಕ್ಷಣೀಯ ಸ್ಥಳಗಳಿಗೆ ಭೇಟಿಕೊಟ್ಟೆವು. ಪರಮಪೂಜ್ಯ ಶ್ರೀಗಳವರಿಗೆ ಅನತಿದೂರದ ಸೊಲ್ಲಾಪುರಕ್ಕೆ ತೆರಳುವ ೯ನೆಯ ರಾಷ್ಟ್ರೀಯ ಹೆದ್ದಾರಿಯಲ್ಲಿರುವ ಶ್ರೀಮಾರುತಿ ಸಕ್ಕರೆ ಕಾರ್ಖಾನೆಯ ಅತಿಥಿಗೃಹದಲ್ಲಿ ವಾಸ್ತವ್ಯ ವ್ಯವಸ್ಥೆಮಾಡಲಾಗಿತ್ತು. ಅಲ್ಲಿ ಪೂಜಾದಿ ಕಾರ್ಯಗಳನ್ನು ಮುಗಿಸಿಕೊಂಡು ನೇರವಾಗಿ ಅನುಭವಮಂಟಪಕ್ಕೆ ಬಂದು, ಅಲ್ಲಿಂದ ಶ್ರೀ ಡಿ. ಕಾಶೀನಾಥ ಶರಣರೊಡನೆ ಬಸವಣ್ಣನವರ ಅರಿವಿನ ಮನೆ, ಅಕ್ಕನಾಗಮ್ಮನ ಗವಿ, ಹರಳಯ್ಯನವರ ಹೊಂಡ, ಪ್ರಭುದೇವರ ಗದ್ದುಗೆ, ಪರುಷಗಟ್ಟೆ, ಕೋಟೆಗಳನ್ನು ನೋಡಿಕೊಂಡು ಹಿಂದಿರುಗಿದೆವು. ಆ ಎಲ್ಲ ಮಹಾಚೇತನಗಳು ಬಾಳಿದ ಆ ಸ್ಥಳಗಳಿಂದು ಮುಳ್ಳುಜಾಲಿ ಗಿಡಗಳಿಂದ, ಅಭಿಮಾನದ ಅಭಾವದಿಂದ ಅವಜ್ಞೆಗೆ ಒಳಗಾಗಿರುವುದನ್ನು ಕಂಡು ಪರಮಪೂಜ್ಯಶ್ರೀಗಳು ಭಾರಮನಸ್ಕರಾದರು, ಭಾವುಕರಾದರು. ತಮ್ಮ ಪಾದುಕೆಗಳನ್ನು ಹೊರಗಿಟ್ಟು ಎಲ್ಲ ಕಡೆ ನಡೆದರು. ದೊಡ್ಡವರನಡೆ ದೊಡ್ಡದಾಗಿಯೇ ಇರುತ್ತದಲ್ಲವೆ. ಅವರ ಪೂಜಾಸ್ಥಳಗಳನ್ನು ಕಂಡಾಗ ಭಕ್ತಿಭಾವ ಭರಿತರಾಗಿ ನಿಂತಿಬಿಟ್ಟರು. ಅವೇನು ವೈಭವದ ವಿಲಾಸ ಮಂದಿರಗಳಲ್ಲ-ಏಕಾಂತ ಏಕಾಗ್ರತೆ ಹೇಳಿ ಮಾಡಿಸಿದ ಧ್ಯಾನಗುಹೆಗಳು, ಲಿಂಗಾನುಸಂಧಾನ ಪ್ರಶಾಂತ ಕೇಂದ್ರಗಳು. ಶ್ರೀಗಳವರು ಮತ್ತು ಲೇಖಕ ಕೋಟೆಯನ್ನು ಹೊರಗಡೆಯಿಂದಲೇ ನೋಡಿಕೊಂಡು ಹಿಂದಿರುಗಬೇಕಾಯಿತು. ಸಮಯಾನುಭಾವ ಅದಕ್ಕೆ ಕಾರಣವಾಯಿತು. ಮಾಲಿನ್ಯ ಮುಕ್ತಮಾಡಬೇಕಾದ ಅಗತ್ಯ ಎಲ್ಲೆಲ್ಲೂ ಎದ್ದು ಕಾಣುತ್ತಿತ್ತು. ಬಸವೇಶ್ವರ ದೇವಾಲಯಕ್ಕೆ ಪೂಜ್ಯರು ಭೇಟಿ ಕೊಟ್ಟಾಗ ಭಕ್ತಾದಿಗಳು ದಾರಿಮಧ್ಯದಲ್ಲಿಯೇ ಕಾಲುಮುಟ್ಟಿ ನಮಸ್ಕರಿಸುತ್ತಿದ್ದುದು ಕಲ್ಯಾಣ ಭೂಮಿಯಲ್ಲಿ ಬಸವಣ್ಣ ಬಿತ್ತಿದ್ದ ಗುರು-ಲಿಂಗ-ಜಂಗಮ ಭಕ್ತಿ ಇನ್ನೂ ಜೀವಂತವಾಗಿದೆ ಎನ್ನಿಸಿತು.

ದಿನಾಂಕ ೬-೧೧-೨೦೦೭ರ ಸಾಮಾಜಿಕ ಚಿಂತನಗೋಷ್ಠಿಯ ನೇತೃತ್ವ ಪರಮಪೂಜ್ಯ ಶ್ರೀಗಳವರದಾಗಿತ್ತು. ಲಾತೂರಿನ ಮಹಾನಗರ ಪಾಲಿಕೆಯ ಅಧ್ಯಕ್ಷರು, ಮಾಜಿ ಕುಲಪತಿಗಳೂ ಆದ ಡಾ. ಜನಾರ್ಧನ ವಾಘಮಾರೆಯವರು ಅಧ್ಯಕ್ಷತೆ ವಹಿಸಿದ್ದರು. ಪ್ರೊ. ಹೆಚ್.ವಿ. ವೀರಭದ್ರಯ್ಯನವರು ಉಪನ್ಯಾಸ ನೀಡುತ್ತ ಬಸವಣ್ಣನವರ ಉದಯವೇ ಜನಪದ ಸಮಷ್ಟಿಯ ಉದ್ಧಾರಕ್ಕಾಗಿತ್ತು. ಸಮಾಜವಿಂದು ಶರಣತತ್ವಗಳ ಬೆಳಕಿನಲ್ಲಿ ಮತ್ತೆ ಎದ್ದುನಿಲ್ಲಬೇಕಾಗಿದೆ'- ಎಂದು ನುಡಿದರು. ಪರಮಪೂಜ್ಯ ಶ್ರೀಗಳವರು ಆಶೀರ್ವಚನ ನೀಡುತ್ತ *"ಇನ್ನು ಸಾವಿರ ವರ್ಷವಾಗಲಿ ಜಗತ್ತಿನ ಕಲ್ಯಾಣ ಬಸವ ತತ್ವಗಳಿಂದ ಮಾತ್ರ ಸಾಧ್ಯ. ಬಸವಣ್ಣ ನವರು ಸ್ವತಂತ್ರ ವಿಚಾರಗಳು. ದೀನ-ದಲಿತ-ಸ್ತ್ರೀಯರ ಶೋಷಣೆಯ ವಿರುದ್ಧ ಸೆಟೆದೆದ್ದು ನಿಂತ ನಿಸ್ಸೀಮ ಧೀಮಂತರು"* ಎಂಬುದಾಗಿ ನುಡಿದರು.

ಶ್ರೀಗಳವರ ಸಂಗಡ ಸೊಲ್ಲಾಪುರದ ಮಾರ್ಗವಾಗಿ ಬೆಳಗಾವಿಯಲ್ಲಿ ಆಯೋಜಿತವಾಗಿದ್ದ ಅಖಿಲ ಭಾರತ ವೀರಶೈವ ಜಿಲ್ಲಾ ಘಟಕದ ವತಿಯಿಂದ ನಿರ್ಮಾಣವಾದ ಲಿಂಗಾಯಿತ ಭವನದ ಸಮಾರಂಭದಲ್ಲಿ ಭಾಗವಹಿಸಲು ಬಿಜಾಪುರ, ಜಮಖಂಡಿ, ಮುಧೋಳ, ಒಬಲೇಶ್ವರಗಳ ಮೂಲಕ ಪಯಣ ಬೆಳೆಸಿದೆವು. ಪ್ರತ್ಯೇಕ ವಾಹನದಲ್ಲಿ ಪೂಜ್ಯ ಶ್ರೀ ಮೇದಿನಿ ಸ್ವಾಮಿಗಳು, ಶ್ರೀ ಅಂಕನಳ್ಳಿ ಶ್ರೀಗಳು, ಶ್ರೀ ಗುಲ್ಬರ್ಗಾ ಶ್ರೀಗಳು, ವಿದ್ವಾನ್ ಶ್ರೀ ಎಂ. ಮಲ್ಲವೀರಯ್ಯನವರು ಪ್ರಯಾಣಿಸಿದರು. ಶ್ರೀಗಳವರ ಕಾರಿನ ಡ್ರೈವರ್ ಶ್ರೀ ರಾಜಶೇಖರ್ ದಾರಿಯುದ್ದಕ್ಕೂ ಮೆಲುದನಿಯಲ್ಲಿ ವಚನಗಳನ್ನು ಹಾಡಿಕೊಳ್ಳುತ್ತ ಡ್ರೈವ್ ಮಾಡುತ್ತಿದ್ದುದು ಲೇಖಕನಿಗೆ ನಿದ್ದೆಬಾರದಂತೆ ಕಾಪಾಡಿತು. ಬೆಳಗಾವಿ ತಲುಪಿದಾಗ ಸಂಜೆ ಏಳೂವರೆಯಾಗಿತ್ತು. ಭಕ್ತರೊಬ್ಬರ ಮನೆಯಲ್ಲಿ ಶ್ರೀಗಳವರ ಪೂಜೆಗೆ ವ್ಯವಸ್ಥೆಯಾಗಿತ್ತು. ಎಲ್ಲವೂ ಸಾಂಗವಾಗಿ ಮುಗಿದು ಶ್ರೀ ನಾಗನೂರು ರುದ್ರಾಕ್ಷಿ ಮಠಕ್ಕೆ ಹೋದಾಗ ರಾತ್ರಿ ಹನ್ನೆರಡು ಘಂಟೆಯಾಗಿತ್ತು. ಲೇಖಕನಿಗೆ ನಾಟಕವಾಡಿದ ರಾತ್ರಿ ನಿದ್ದೆಯಿಲ್ಲದ್ದರಿಂದಾಗಿ ಮಲಗಿದ ಮೂರು ನಿಮಿಷಗಳಲ್ಲಿ ಗಡದ್ದಾಗಿ ನಿದ್ದೆ ಆವರಿಸಿತು. ಎದ್ದಾಗ ೭-೧೧-೨೦೦೭ರ ಸೂರ್ಯೋದಯದ ಮುನ್ನ ಯಾವತ್ತೂ ನಡೆಯುವ ಪರಮಪೂಜ್ಯ ಶ್ರೀಗಳವರ ಪೂಜೆ ನಡೆದಿತ್ತು. ಸ್ನಾನಮುಗಿಸಿ, ಲೇಖಕ, ಡ್ರೈವರ್ ರಾಜ, ಪೂಜೆಗೆ ನಡೆದೆವು. ಅನಂತರ ಪ್ರಸಾದ ಮುಗಿಸಿಕೊಂಡು ಲಿಂಗಾಯತ ಭವನದ ಬಳಿ ನಡೆದಿದ್ದ ಸಮಾರಂಭದ ಧಾರ್ಮಿಕ ಗೋಷ್ಠಿಗೆ ನಾಗನೂರು ಮಠದ ಪೂಜ್ಯ ಶ್ರೀ ಸಿದ್ಧರಾಮಸ್ವಾಮಿಗಳು, ಹೊಸಪೇಟೆಯ ಪೂಜ್ಯ ಶ್ರೀ ಸಂಗನ ಬಸವಸ್ವಾಮಿಗಳು, ಬೇರೆ ಬೇರೆ ಮಠಾಧೀಶರು, ಶ್ರೀ ಗೊ.ರು. ಚನ್ನಬಸಪ್ಪನವರು, ಶ್ರೀ ಬಿ.ಎಸ್. ಮುದ್ದಪ್ಪನವರು, ಶ್ರೀ ಪಾವಟೆಯವರು ಮತ್ತಿತರ ಗಣ್ಯರು ನಡೆದೆವು, ಸಮಾರಂಭ ವ್ಯವಸ್ಥಿತವಾಗಿ ನಡೆಯಿತು.

ಸಭೆಯಲ್ಲಿ ಮಾತನಾಡಿದ ಒಬ್ಬಿಬ್ಬರು ಮಠಾಧೀಶರು ಕೆಲವು ಪ್ರಶ್ನೆಗಳನೆತ್ತಿದಾಗ, ಪೂಜ್ಯ ಶ್ರೀಸಂಗನ ಬಸವಸ್ವಾಮಿಗಳು ಶಾಂತವಾಗಿ ಸದುತ್ತರ ನೀಡಿ ಸಭೆಯನ್ನು ನಿಯಂತ್ರಿಸಿದರು. ಪರಮಪೂಜ್ಯರು ಆಶೀರ್ವಚನ ನೀಡುತ್ತ "ಸಮಾಜವಿಂದು ಸಹನೆ, ಸಂಘಟನೆ, ವಿಚಾರಗಳಿಂದ ಮುಂದುವರಿಯಬೇಕಿದೆ" – ಎಂದರು.

ತುಮಕೂರಿಗೆ ಪ್ರಯಾಣ ಬೆಳೆಸಿದೆವು. ಲೇಖಕ ಮತ್ತು ಮೇದಿನಿ ಶ್ರೀಗಳು, ಅಂಕನಹಳ್ಳಿ ಶ್ರೀಗಳು, ಶ್ರೀ ಬಸವರಾಜು, ಡ್ರೈವರ್ ಶ್ರೀವೇಲು ಪ್ರತ್ಯೇಕವಾಗಿ ಹೊರಟೆವು. ಪರಮಪೂಜ್ಯ ಶ್ರೀಗಳವರು, ಶ್ರೀಮಲ್ಲವೀರಯ್ಯನವರು, ಡ್ರೈವರ್ ರಾಜು ಶ್ರೀಗಳವರ ಕಾರಿನಲ್ಲಿ ಸಾಗಿದರು. ಶ್ರೀಮಠ ತಲುಪಿದಾಗ ೭-೧೧-೨೦೦೭ರ ಸಂಜೆ ಏಳೂವರೆಯಾಗಿತ್ತು.

ಬಸವ ಕಲ್ಯಾಣ ನೆನಪಿನಲ್ಲಿ ಸದಾ ಉಳಿಯು ವಂತಾಯಿತು.

❀

## ವಚನಗಳ ವಿಶ್ಲೇಷಣೆ

*ನುಡಿದರೆ ಮುತ್ತಿನ ಹಾರದಂತಿರಬೇಕು !*
*ನುಡಿದರೆ ಮಾಣಿಕ್ಯದ ದೀಪ್ತಿಯಂತಿರಬೇಕು !*
*ನುಡಿದರೆ ಸ್ಫಟಿಕದ ಶಲಾಕೆಯಂತಿರಬೇಕು !*
*ನುಡಿದರೆ ಲಿಂಗ ಮೆಚ್ಚಿ ಅಹುದಹುದೆನಬೇಕು !*
*ನುಡಿಯೊಳಗಾಗಿ ನಡೆಯದಿದ್ದರೆ*
*ಕೂಡಲಸಂಗಮದೇವನೆಂತೊಲಿವನಯ್ಯ ?!*

ಆಣಿ ಮುತ್ತಿನ ಹಾರವನ್ನು ನೋಡಿರುವಿರಾ? ಅದೆಷ್ಟು ಓರಣವಾಗಿ, ಸ್ಥಾನೋಚಿತವಾಗಿ ಜೋಡಣೆಯಾಗಿ, ಹೊಳಪಾಗಿ, ಕಂಡವರ ಕಣ್ಮಣಿಯಾಗಿರುವುದು! ಹಾಗಿರಬೇಕು ನಾವಾಡುವ ಮಾತು, ಸಮಯೋಚಿತವಾಗಿ, ನಯವಾಗಿ, ಒಪ್ಪವಾಗಿ, ಆತ್ಮರಸಿಕರು ಒಪ್ಪುವ ಹಾಗೆ! ನಮ್ಮ ಮಾತು ಮಾಣಿಕ್ಯದಂತೆ ನಮ್ಮ ಅಂತರಂಗದ ಅನುರಾಗದ ಮೆರುಗನ್ನು ಹತ್ತಾರು ಕಡೆ ಎಸಳೆಸಳಾಗಿ ಹೊರಹೊಮ್ಮಿಸುತ್ತಿರಬೇಕು. ಅದು ಶುದ್ಧಸ್ಫಟಿಕದ ಶಲಾಕೆಯಂತೆ ಕೊಂಕಿಲ್ಲದೆ, ಕಳಂಕದ ಸೋಂಕಿಲ್ಲದೆ ನೇರವಾಗಿ ಹೃದಯಸ್ಪರ್ಶಿಯಾಗಿರಬೇಕು. ಮೇಲಾಗಿ, ಮಾತನಾಡಿದರೆ ಮಹಾದೇವನು ಮೆಚ್ಚಿ ತಲೆದೂಗುವಂತಿರಬೇಕು. ಎಚ್ಚರಿಕೆ! ಮಾತು ಮಾಟವಾಗದೆ ಹೋದರೆ ದೇವರೊಲಿಯುವುದಿಲ್ಲ !!

*ಹಾಲತೊರೆಗೆ ಬೆಲ್ಲದ ಕೆಸರು*
*ಸಕ್ಕರೆಯ ಮಳಲು, ತವರಾಜದ ನೊರೆತೆರೆಯಂತೆ*
*ಆದ್ಯರ ವಚನವಿರಲು;*
*ಬೇರೆ ಭಾವಿಯ ತೋಡಿ*
*ಉಪ್ಪು ನೀರುಂಬುವನ ವಿಧಿಯಂತೆ ಆಯಿತ್ತೆನ್ನ ಮತಿ*
*ಕೂಡಲಸಂಗಮದೇವ.*

ಊರ ದಂಡೆಯಲ್ಲೇ ತಿಳಿನೀರಿನ ತೊರೆ ಹರಿಯುತ್ತಿದ್ದರೂ – ಯಾವನಾದರೊಬ್ಬನು ತನ್ನ ಮನೆಯಲ್ಲಿ ಒಂದು ಭಾವಿಯನ್ನು ತೋಡಿ ಬಂದ ಉಪ್ಪು ನೀರನ್ನೇ – ನನ್ನ ಭಾವಿಯದೆಂದೋ, ತೊರೆ ದೂರವೆಂದೋ – ಕುಡಿಯುತ್ತಿದ್ದರೆ ಅವನು ಮೂರ್ಖ. ಬರೀ ನೀರಿನ ತೊರೆಯನ್ನು ತೊರೆದವನೇ ಇಷ್ಟು ಶೋಚನೀಯನಾದರೆ – ಬಳಿಯಲ್ಲೇ ಹಾಲಿನ ಹೊಳೆ ಹರಿಯುತ್ತಿದ್ದು, ಅದರ ಮರಳೆಲ್ಲಾ ಸಕ್ಕರೆಯಾಗಿ, ನೊರೆ ತೆರೆಯಿಲ್ಲ ತವರಾಜವೆಂಬ ಸ್ವಾದು ದ್ರವ್ಯವಾಗಿ, ಅದರ ಪಾನೀಯವು ಮಧುರಾತಿಮಧುರವಾಗಿರುವಾಗ, ಅದನ್ನು ಬಿಟ್ಟು ಭಾವಿಯನ್ನು ತೋಡಿ, ಉಪ್ಪುನೀರನ್ನು ಕುಡಿಯುವನಾದರೋ ಹತ್ಯಭಾಗ್ಯ ಶತಮೂರ್ಖ! ಭವತಾರಿಣಿಯಾಗಿ, ಸರ್ವಜನಾದರಣೀಯವಾಗಿ, ಮನೆ ಮನೆಯ ಮುಂದೆ (ಮನೆ ಮಾತಾಗಿ), ಪುರಾತನಶಿವಶರಣರ ವಚನಸುಧಾಪ್ರವಾಹ ಹರಿಯತ್ತಿರವಾಗ – ಬಸವಣ್ಣನವರು ತಾವು ಬೇರೆ ವಚನಗಳನ್ನು ರಚಿಸುತ್ತಿರುವುದು ವ್ಯರ್ಥಶ್ರಮವೆಂದೂ, ಮೇಲಾಗಿ ಆ ತಮ್ಮ ವಚನಗಳು ನೀರಸವೆಂದೂ, ಅವುಗಳ ರಚನೆಯಲ್ಲಿ ತೊಡಗಿ, ಪುರಾತನ ಶರಣರ ವಚನ-ಸಾಹಿತ್ಯ ಸುಧೆಯನ್ನು ಮತ್ತೆ ಮತ್ತೆ ಸವಿಯುವ ಸುಯೋಗವನ್ನು ಕಳೆದುಕೊಂಡಿರುವಾದಾಗಿಯೂ ಹೇಳಿ ತಮ್ಮ ವಿನಯವನ್ನೇ ಮೆರೆದಿರುವರು.

ವಾಸ್ತವಾಂಶವೆಂದರೆ – ಶರಣರ ವಚನಸಾಹಿತ್ಯ ಸಾಗರದಾಳದ ಬೆಲೆ ಬಾಳುವ ಮುತ್ತುಗಳಂತಿವೆ ಬಸವಣ್ಣನವರ ವಚನಗಳು.

*ಆದ್ಯರ ವಚನ ಪರುಷ ಕಂಡಣ್ಣ !*
*ಸದಾಶಿವನೆಂಬ ಲಿಂಗವ ನೆರೆ ನಂಬುವುದು*
*ನಂಬಲೊಡನೆ ನೀ (ವಿಜಯಿ) ಕಂಡಣ್ಣ !*
*ಅಧರಕ್ಕೆ ಕಹಿ ! ಉದರಕ್ಕೆ ಸಿಹಿ !!*
*ಕೂಡಲ ಸಂಗನ ಶರಣರ ವಚನ ಬೇವ ಸವಿದಂತೆ !*

ಮುಟ್ಟಿದ ಕಬ್ಬಾಲೋಹವನ್ನೂ ಅಚ್ಚ ಭಂಗಾರವಾಗಿಸುವ ಅದ್ಭುತಶಕ್ತಿಯ ಸ್ಪರ್ಶಮಣಿ – ಶರಣರ ತಾರಕಶಕ್ತಿಯ ವಚನವಾಣಿ ! ಅದು ನಿನ್ನ ಕಿವಿಗೆ ಬಿದ್ದರೆ ಸಾಕು ನೀವು ಸರ್ವಾಂಗ ಶುದ್ಧವಾಗುವೆ. ಆ ವಾಣಿ ನಿನ್ನ ಕಿವಿಗೆ ಕಟುವಾಗಿರಬಹುದು, ತಲೆ ಕೊಡವಬೇಡ, ಅದು ಆತ್ಮಕ್ಕಂತೂ ಪುಟಪಾಕ – ಬಾಯಿಗೆ ಕಹಿಯಾದ ಬೇವು ಆಯುರಾರೋಗ್ಯ ನಿರ್ವಾಹಿಯಾಗಿರುವ ಹಾಗೆ !

*ಹಾವು ತಿಂದವರ ನುಡಿಸಬಹುದು*
*ಗರ ಹೊಡೆದವರ ನುಡಿಸಬಹುದು !*
*ಸಿರಿಗರ ಹೊಡೆದವರ ನುಡಿಸಲು ಬಾರದು ನೋಡಯ್ಯ !*
*ಬಡತನವೆಂಬ ಮಂತ್ರವಾದಿ ಹೊಗಲು*
*ಒಡನೆ ನುಡಿವರಯ್ಯ ಕೂಡಲ ಸಂಗಮದೇವ !*

ಹಾವು ಕಚ್ಚಿರುವುದಿಲ್ಲ, ದೆವ್ವ ಹಿಡಿದಿರುವುದಿಲ್ಲ. ಆದರೂ ಧನಿಕರು ವಿಷವೇರಿದವರಂತೆ ಸೆಟೆದಿರುವರು, ಮೈಮೇಲೆ ಬಂದವರಂತೆ ವಿಕಾರವಾಗಿರುವರು. ಆಶ್ಚರ್ಯವೇನು? ಧನಮದವೆಂಬುದು ಹಾವಿನ ವಿಷಕ್ಕಿಂತ ಘೋರ, ಭೂತಚೇಷ್ಟೆಗಿಂತ ಭಯಂಕರ ! ಏಕೆಂದರೆ ಹಾವು ಕಚ್ಚಿದವರನ್ನು ಸಮೀಪಿಸಿ, ಮಂತ್ರಿಸಿ, ಏನಪ್ಪ ಹೇಗಿರುವೆಯೆಂದು ಮಾತನಾಡಿಸಬಹುದು; ಭೂತ ಹಿಡಿದವರನ್ನೂ ಅಷ್ಟೇ ! ಆದರೆ ಸಿರಿಯ ಸೊಕ್ಕೇರಿದವರನ್ನು ಸಮೀಪಿಸಲೇ ಸಾಧ್ಯವಿಲ್ಲ – ಮಾತನಾಡಿಸುವುದಿನ್ನೆಲ್ಲಿ? ಅವರು ಜಂತ್ರಮಂತ್ರಗಳಿಗೂ ಮೀರಿದ ಉತ್ಕ್ರಮಣಾವಸ್ಥೆಯಲ್ಲಿರುವರು. ಬಡತನವೆಂಬ ಮಂತ್ರವಾದಿ ಅವರ ಮನೆಯ ಹೊಸಲಿಗೆ ಕಾಲಿಟ್ಟರೆ ಮಾತ್ರ ಕಣ್ ತೆರೆಯುವರು. ಸರಕ್ಕನೆ ಅಪ್ಪ, ಅಣ್ಣ ಎಂದು ಎಲ್ಲರೊಡನೆ ಮಾತನಾಡುವರು, ಕೈಕಾಲು ಸಡಿಲವಾಗುವುದು, ಮುಖದ ಗಂಟು ಬಿಚ್ಚುವುದು !

– ಸಂ. ಡಾ. ಎಲ್. ಬಸವರಾಜು

*(ಕೃಪೆ : ಬಸವ ವಚನಾಮೃತ)*







## ನ್ಯೂಜಿಲೆಂಡ್ ಪ್ರವಾಸಾನುಭವ

– ಪಿ.ಎಂ. ನಾಗಭೂಷಣಯ್ಯ
ಮುಖ್ಯೋಪಾಧ್ಯಾಯರು,
ಶ್ರೀ ಬಸವೇಶ್ವರ ಆಂಗ್ಲ ಮಾಧ್ಯಮ ಬಾಲಕಿಯರ ಪ್ರೌಢಶಾಲೆ,
ಬಿ.ಹೆಚ್. ರಸ್ತೆ, ತುಮಕೂರು.

ಇದು ಇಂಡಿಯಾದಿಂದ ಸುಮಾರು ೧೪ ಸಾವಿರ ಕಿ.ಮೀ. ದೂರದಲ್ಲಿದೆ. ಬೆಂಗಳೂರಿನಿಂದ ಸಿಂಗಪುರ ಮಾರ್ಗವಾಗಿ ವಿಮಾನದಲ್ಲಿ ೧೫ ಗಂಟೆಗಳ ಪ್ರಯಾಣ. ಎಲ್ಲದರಲ್ಲಿಯೂ ಬಹಳ ಅಚ್ಚುಕಟ್ಟಾದ ವ್ಯವಸ್ಥೆ, ಶುಭ್ರತೆ, ಧೂಳಿಲ್ಲ, ಪರಿಸರಮಾಲಿನ್ಯವಿಲ್ಲ, ಪ್ರಾಮಾಣಿಕ ಜನ ಹಾಗೂ ಎಲ್ಲಿ ನೋಡಿದರೂ ಹಸಿರು ಕಂಗೊಳಿಸುತ್ತಿದೆ.

ನ್ಯೂಜಿಲೆಂಡ್ ದ್ವೀಪ, ಮೂರು ಭಾಗಗಳನ್ನು ಹೊಂದಿದೆ. ಉತ್ತರ ದ್ವೀಪ, ದಕ್ಷಿಣ ದ್ವೀಪ ಹಾಗೂ ದಕ್ಷಿಣಕ್ಕಿರುವ ಅತ್ಯಂತ ಚಿಕ್ಕ ದ್ವೀಪ. ಇದರ ಹೆಸರು ಸ್ಟೀವರ್ಟ್ ದ್ವೀಪ ಎಂದು. ನ್ಯೂಜಿಲೆಂಡ್ ಆಸ್ಟ್ರೇಲಿಯಾದಿಂದ ದಕ್ಷಿಣ ಪೂರ್ವಕ್ಕೆ (ಆಗ್ನೇಯ ದಿಕ್ಕಿಗೆ) ೨೨೫೦ ಕಿ.ಮೀ. ಪಶ್ಚಿಮ ಉತ್ತರ ಅಮೆರಿಕಾದಿಂದ ೧೦,೪೦೦ ಕಿ.ಮೀ. ದೂರದಲ್ಲಿದೆ. ದಕ್ಷಿಣ ಧೃವಕ್ಕೆ ಬಹಳ ಸಮೀಪ. ಅಂಟಾರ್‌ಟಿಕಾಕ್ಕೆ ಇಲ್ಲಿಂದ ಕೇವಲ ೪೦೦೦ ಕಿ.ಮೀ. ದೂರ. ಇದರ ಪಶ್ಚಿಮಕ್ಕೆ ವಿಶಾಲವಾದ ತಾಸ್ಮಾನ್ ಸಮುದ್ರ, ಉತ್ತರ ಪೂರ್ವ ಹಾಗೂ ದಕ್ಷಿಣಕ್ಕೆ ಫೆಸಿಫಿಕ್ ಮಹಾಸಾಗರಗಳಿವೆ. ಇದರ ಒಟ್ಟು ಉದ್ದ ೧೬೦೦ ಕಿ.ಮೀ.ಗಳು, ವಿಸ್ತೀರ್ಣ ೨,೬೮,೭೦೦ ಚ.ಕಿ.ಮೀ.ಗಳು. ಇದು ವಿಸ್ತೀರ್ಣದಲ್ಲಿ ಜಪಾನ್‌ನಷ್ಟು ಅಥವಾ ಇಂಗ್ಲೆಂಡ್‌ನಷ್ಟು ಅಥವಾ ನಮ್ಮ ಆಂಧ್ರ ಪ್ರದೇಶದಷ್ಟಿದೆ ಎಂದು ತಿಳಿದುಬಂದಿದೆ.

ಆ ದೇಶದೊಳಕ್ಕೆ ಬೇರೆ ದೇಶದ ಹಣ್ಣುಗಳನ್ನು, ತರಕಾರಿಗಳನ್ನು, ಸಸ್ಯಗಳನ್ನೂ, ನೀರನ್ನು ಬೆರಸಿ ತಯಾರಿಸಿದ ಆಹಾರ ಪದಾರ್ಥಗಳನ್ನು, ಮೊಟ್ಟೆ ಮತ್ತು ಪ್ರಾಣಿಜನ್ಯ ಪದಾರ್ಥಗಳನ್ನು ತೆಗೆದು ಕೊಂಡು ಹೋಗುವಂತಿಲ್ಲ. ಕಾರಣ, ಅಲ್ಲಿಯ ಸಸ್ಯರಾಶಿಗೆ, ಹಣ್ಣು ತರಕಾರಿಗಳಿಗೆ ಹಾಗೂ ಪಕ್ಷಿಗಳಿಗೆ ರೋಗಾಣುಗಳ ಸೋಂಕು ಉಂಟಾಗಿ ಆ ಕಾಯಿಲೆ ಬರಬಹುದು ಎಂಬ ಮುಂಜಾಗ್ರತೆ, ಈ ನಿಷೇಧವನ್ನು ಕಟ್ಟುನಿಟ್ಟಾಗಿ ಪಾಲಿಸುತ್ತಾರೆ. ಒಂದು ವೇಳೆ ಡಿಕ್ಲೇರ್ ಮಾಡದೆ ತೆಗೆದುಕೊಂಡು ಹೋದರೆ ನಿರ್ದಾಕ್ಷಿಣ್ಯವಾಗಿ ಬಹಳಷ್ಟು ದಂಡಹಾಕುತ್ತಾರೆ. (ಇತ್ತೀಚೆಗೆ ಭಾರತ ಕ್ರಿಕೆಟ್ ತಂಡದ ಸದಸ್ಯರು ಕೊಳಕು ಷೂ ಹಾಕಿಕೊಂಡಿದ್ದಕ್ಕೆ ಬಾರಿ ದಂಡ ತೆರಬೇಕಾಯಿತೆಂದು ಪತ್ರಿಕೆಗಳಲ್ಲಿ ಪ್ರಕಟವಾದ ಸುದ್ದಿಯನ್ನು ಗಮನಿಸಬಹುದು. ಸಂಪಾದಕ) ಹಾಗೂ ಆ ಪದಾರ್ಥಗಳನ್ನು (ಡಿಕ್ಲೇರ್ ಮಾಡಿದ್ದರೂ) ನಾಶಮಾಡುತ್ತಾರೆ. ಒಳಗೆ ಬಿಡುವುದಿಲ್ಲ.



ಪಾಸ್ಮಾನ್ ಸಮುದ್ರದಲ್ಲಿರುವ ಡೌಟ್‌ಫುಲ್ ಸೌಂಡ್ ಎಂಬ ದ್ವೀಪದ ಒಂದು ಸುಂದರ ನೋಟ



ನ್ಯೂಜಿಲೆಂಡ್‌ನಲ್ಲಿನ (ಡ್ಯುನೆಡಿನ್ ಪಟ್ಟಣದ ಹತ್ತಿರ) ಪ್ರಕೃತಿಯ ಒಂದು ಸುಂದರ ನೋಟ

ಅಲ್ಲಿಯ ಜನ ಬಹಳ ಸೌಜನ್ಯದಿಂದ ವರ್ತಿಸುತ್ತಾರೆ. ಕಾನೂನನ್ನು ಬಹಳ ಗೌರವಿಸುತ್ತಾರೆ. ಹಿರಿಯ ನಾಗರಿಕರಿಗೆ ಬಹಳ ಗೌರವ ಕೊಡುತ್ತಾರೆ. ಅಲ್ಲಿಯ ವಿಮಾನ ನಿಲ್ದಾಣಗಳು ಬಹಳ ದೊಡ್ಡದಾಗಿದ್ದು, ಎಲ್ಲಾ ರೀತಿಯ ಸೌಲಭ್ಯಗಳನ್ನೂ ಹೊಂದಿರುತ್ತವೆ. ವಿಮಾನ ನಿಲ್ದಾಣಗಳಲ್ಲಿ ಮಾಹಿತಿ ಕೇಂದ್ರವಿದ್ದು, ಎಲ್ಲಾ ರೀತಿಯ ಮಾಹಿತಿಯನ್ನು ಪ್ರವಾಸಿಗರಿಗೆ ಒದಗಿಸುತ್ತಾರೆ.

೨೦೦೦ದ ನವೆಂಬರ್ ೧ನೇ ತಾರೀಖು ನಾವು ಅಲ್ಲಿ ಇಳಿದಾಗ ನಮ್ಮ ಮೊದಲ ಅನುಭವವೇ ಛಳಿ. ನಮ್ಮಲ್ಲಿ ಛಳಿಗಾಲವಿದ್ದಾಗ ಅಲ್ಲಿ ಬೇಸಿಗೆ ಕಾಲ, ಇಲ್ಲಿ ಬೇಸಿಗೆ ಕಾಲವಿದ್ದಾಗ ಅಲ್ಲಿ ಛಳಿಗಾಲ. ನಾವು ಹೋದಾಗ ಅಲ್ಲಿ ಬೇಸಿಗೇ ಕಾಲ. ಆದರೆ ನಮಗೆ ಅದು ಬೇಸಗೆ ಕಾಲ ಎನ್ನಿಸಲೇ ಇಲ್ಲ. ಕಾರಣ, ನಮ್ಮ ಛಳಿಗಾಲಕ್ಕಿಂತಲೂ ಛಳಿ ಜಾಸ್ತಿ ಅನ್ನಿಸಿತು. ಬೇಸಿಗೆಯಲ್ಲಿ ಅಲ್ಲಿಯ ಉಷ್ಣಾಂಶ ೮ ಡಿಗ್ರಿಯಿಂದ ೧೮ ಡಿಗ್ರಿಯವರೆಗೆ ಇರುತ್ತದೆ. ಛಳಿಗಾಲದಲ್ಲಿ ೦ ಡಿಗ್ರಿಯಿಂದ ೧೦ ಡಿಗ್ರಿಯವರೆಗೆ ಇರುತ್ತದೆ, ಜನವರಿ ಹಾಗೂ ಫೆಬ್ರವರಿಯಲ್ಲಿ ಬಹಳ ವಿರಳವಾಗಿ ಉಷ್ಣಾಂಶ ೨೦ ಡಿಗ್ರಿಯಿಂದ ೨೪ ಡಿಗ್ರಿಗೆ ಏರುತ್ತದೆ.

ಉತ್ತರ ದ್ವೀಪ ಹೆಚ್ಚು ಬೆಟ್ಟಗಳನ್ನು ಹೊಂದಿಲ್ಲ, ಆದರೆ ದಟ್ಟವಾದ ಕಾಡುಗಳನ್ನು, ವಿಶಾಲವಾದ ಮೈದಾನಗಳನ್ನು ಸುಂದರ ಬೀಚುಗಳನ್ನು ಹೊಂದಿದೆ. ದಕ್ಷಿಣ ದ್ವೀಪ ಹೆಚ್ಚು ಬೆಟ್ಟಗಳನ್ನೂ, ಕಡಿದಾದ ಕಣಿವೆಗಳನ್ನೂ, ವಿಶಾಲವಾದ ಸರೋವರಗಳನ್ನು ಹೊಂದಿದೆ. ದಕ್ಷಿಣ ದ್ವೀಪದ ಬೆಟ್ಟಗಳಲ್ಲಿ ಒಂದು ರೀತಿಯ ಹಸಿರು ಕಲ್ಲು ದೊರೆಯುತ್ತದೆ. ಇದನ್ನು ಜೇಡ್ ಎಂದು ಕರೆಯುತ್ತಾರೆ. ಈ ಕಲ್ಲಿಗೆ ಪಾಲಿಷ್‌ಮಾಡಿ ಹೊಳಪುಕೊಟ್ಟು ಅನೇಕ ರೀತಿಯ ಒಡವೆಗಳನ್ನು ತಯಾರಿಸುತ್ತಾರೆ. ಇದು ಬಹಳ ದುಬಾರಿಯಾದ ಕಲ್ಲು. ಪ್ರಪಂಚದಲ್ಲಿ ಇಲ್ಲಿ ಬಿಟ್ಟರೆ, ಚೀನಾದಲ್ಲಿ ಮಾತ್ರ ದೊರೆಯುತ್ತದೆ ಎಂದು ಹೇಳುತ್ತಾರೆ. ಇವೆರಡರಲ್ಲಿ ನ್ಯೂಜಿಲೆಂಡ್‌ನದು ಬಹಳ ಉತ್ತಮವಾದದ್ದು ಎಂದು ಹೇಳುತ್ತಾರೆ.

ಇಲ್ಲಿಯ ಪ್ರಕೃತಿ ನೋಡಲು ಬಹಳ ಸುಂದರ. ಇಲ್ಲಿ ಬೆಳೆಯುವ ಅನೇಕ ರೀತಿಯ ಮರಗಳಲ್ಲಿ ''ಸಿಲ್ವರ್ ಫರ್ನ್'' ಎಂಬುದು ಪ್ರಸಿದ್ಧವಾದುದು. ಇದರ ಗರಿಯ ಚಿತ್ರವನ್ನೇ ನ್ಯೂಜಿಲೆಂಡ್ ಕ್ರಿಕೆಟ್ ಆಟಗಾರರ ಅಂಗಿಗಳ ಮೇಲೆ ಚಿತ್ರಿಸಲಾಗಿದೆ. ಇದು ಅವರ ರಾಷ್ಟ್ರೀಯ ಚಿಹ್ನೆಯಾಗಿ ಅಂಗೀಕರಿಸಿದ್ದಾರೆ. ಇಲ್ಲಿ ಬೆಳೆಯುವ ಅನೇಕ ಸುಂದರ ಪುಷ್ಪ ಗಿಡಗಳಲ್ಲಿ ''ಪೋಹುತುಕುವ'' ಬಹಳ ಪ್ರಸಿದ್ಧಿಯಾದುದು. ಇದನ್ನು ನ್ಯೂಜಿಲೆಂಡ್‌ನ ಕ್ರಿಸ್‌ಮಸ್ ಗಿಡ ಎಂದು ಕರೆಯುತ್ತಾರೆ. ಈ ಗಿಡ ದುಂಡಾದ ಹೂಗಳನ್ನು ಬಿಡುತ್ತದೆ. ನೋಡಲು ತುಂಬಾ ಸುಂದರವಾಗಿ ಕಾಣುತ್ತವೆ.

ಇಲ್ಲಿಯ ಜನರಿಗೆ ಕುರಿ ಸಾಕಣಿಕೆಯೇ ಮುಖ್ಯ ಉದ್ಯೋಗ. ಉಣ್ಣೆ, ಮಾಂಸ ಹಾಗೂ ಹಾಲಿನ ಉತ್ಪನ್ನಗಳನ್ನು ಹೆಚ್ಚಾಗಿ ರಫ್ತು ಮಾಡುತ್ತಾರೆ, ಇಲ್ಲಿಯ ಮೈದಾನಗಳಲ್ಲಿ ಮೇಯುವ ಕುರಿಗಳನ್ನು, ನಾಯಿಗಳು ಕಾಯುತ್ತವೆ. ಇವುಗಳ ಒಂದೊಂದರ ಬೆಲೆ ಹತ್ತು ಸಾವಿರ ಡಾಲರ್‌ಗಳು.

ನ್ಯೂಜಿಲೆಂಡ್ ಭೂಮಿಯ ಸುತ್ತ ಸಮುದ್ರಗಳು ಬಹಳ ಆಳವಾಗಿರುವುದರಿಂದ, ಅಲ್ಲಿಯ ಬೀಚುಗಳು ಬಹಳ ದೊಡ್ಡವಾಗಿಲ್ಲ, ಆದರೂ ನೋಡಲು ಸುಂದರವಾಗಿವೆ. ಇಲ್ಲಿಯ ಬೀಚುಗಳಲ್ಲಿ ಕರೀ ಮರಳೇ ಹೆಚ್ಚಾಗಿ ಕಂಡುಬರುತ್ತದೆ.





ಇಲ್ಲಿಯ ಜನರಿಗೆ ಮೀನು ಹಿಡಿಯುವುದು ಒಂದು ಮುಖ್ಯವಾದ ಹವ್ಯಾಸ ಹಾಗೂ ಬೋಟಿಂಗ್ ಒಂದು ಆಕರ್ಷಕ ಕ್ರೀಡೆ. ''ಮುರುವಾಯಿ ಬೀಚ್'' ''ಷೇಕ್ಸ್‌ಪಿಯರ್ ಬೀಚ್'' ಎಂಬ ಎರಡು ಬೀಚ್‌ಗಳು ಮುಖ್ಯವಾದವು.



''ಕ್ವೀನ್ಸ್ ಟೌನ್'' (ದಕ್ಷಿಣದ್ವೀಪ) ಪಟ್ಟಣದಲ್ಲಿನ ಒಂದು ಸುಂದರ ಉದ್ಯಾನವನದಲ್ಲಿ ನಾಗಭೂಷಣಯ್ಯ ಹಾಗೂ ಅವರ ಪತ್ನಿ ಅನ್ನಪೂರ್ಣಮ್ಮ

### *ವೈಟೋಮೋ ಮಿಂಚು ಹುಳುಗಳ ಗವಿಗಳು*

ಉತ್ತರ ನ್ಯೂಜಿಲೆಂಡ್ ದ್ವೀಪದಲ್ಲಿ ಆಕ್ಲೆಂಡ್ ಪಟ್ಟಣದಿಂದ (ನ್ಯೂಜಿಲೆಂಡ್‌ನ ಅತಿ ದೊಡ್ಡ ಪಟ್ಟಣ) ಸುಮಾರು ೨೦೦ ಕಿ.ಮೀ. ದೂರದಲ್ಲಿರುವ ವೈಟೋಮೋ ಎಂಬ ಸ್ಥಳದಲ್ಲಿ ಗವಿಗಳಿವೆ. ಇವು ಸುಣ್ಣ ಕಲ್ಲಿನ ಗವಿಗಳು. ಸುಮಾರು ೩೦ ಮಿಲಿಯನ್ ವರ್ಷಗಳ ಹಿಂದೆ ಈ ಪ್ರದೇಶ ಸಮುದ್ರ ತಳದಲ್ಲಿದ್ದು, ಆಗ ತಳದಲ್ಲಿನ ಕಪ್ಪೆಚಿಪ್ಪುಗಳು ಒಂದಕ್ಕೊಂದು ಒತ್ತಡದಿಂದ ಒಟ್ಟಾಗಿ ಸೇರಿ ಸುಣ್ಣಕಲ್ಲು ಉತ್ಪತ್ತಿಯಾಗಿ ಹೊರಬಂದು, ಬಿರುಕುಗಳುಂಟಾಗಿ, ಆ ಬಿರುಕುಗಳಲ್ಲಿ ನೀರು ಹರಿದು, ಲಕ್ಷಾಂತರ ವರ್ಷಗಳ ಕಾಲ ಈ ಕ್ರಿಯೆ ನಡೆದು, ಗವಿಗಳು ನಿರ್ಮಾಣವಾಗಿವೆ ಎಂದು ಅಲ್ಲಿಯ ಮಾಹಿತಿ ತಿಳಿಸುತ್ತದೆ.

ಈ ಗವಿಗಳಲ್ಲಿ ಹೋದಾಗ, ಸುಣ್ಣ ಕಲ್ಲು ಕಡ್ಡಿಗಳ ಆಕಾರದಲ್ಲಿ, ಕಂಬಗಳ ಆಕಾರದಲ್ಲಿ ಹಾಗೂ ವಿವಿಧ ಆಕಾರಗಳಲ್ಲಿ ಭೂಮಿಯೊಳಗೆ ಜೋತು ಬಿದ್ದಿರುವುದು ಕಂಡುಬರುತ್ತದೆ. ಇದೊಂದು ಸುಂದರ ವಿಸ್ಮಯ ದೃಶ್ಯ. ಈ ಗವಿಗಳ ಒಳಭಾಗದ ನೆಲಮಟ್ಟದಲ್ಲಿ, ನದಿಯೊಂದು ಹರಿಯುತ್ತಿದೆ. ನದಿಗೆ ಬಹಳ ಹತ್ತಿರವಿರುವ ಗವಿಯ ಒಳ ಭಾಗ ತಂಪಾಗಿದ್ದು, ಅಲ್ಲಿ ಲಕ್ಷಾಂತರ ಮಿಣುಕು ಹುಳುಗಳು ಕಂಡು ಬರುತ್ತವೆ.

ಈ ಗವಿಗಳ ಇರುವಿಕೆಯನ್ನು ಗುರುತಿಸಲಾಗಿದೆ. ಈ ನೂರು ವರ್ಷಗಳಲ್ಲಿ ಮಿಲಿಯಗಟ್ಟಲೆ ಜನ ಈ ಗವಿಗಳನ್ನು ವೀಕ್ಷಿಸಿದ್ದಾರೆ. ಇದೊಂದು ನ್ಯೂಜಿಲೆಂಡ್‌ನಲ್ಲಿ ನೋಡಲೇ ಬೇಕಾದ ಅದ್ಭುತ ಸ್ಥಳ.

ಈ ಗವಿಗಳಿಗೆ ಯಾರಾದರೂ, ಏನಾದರೂ ಹಾನಿಯುಂಟುಮಾಡಿದರೆ ಅವರಿಗೆ ಒಂದು ಸಾವಿರ ಡಾಲರ್ ದಂಡ ಹಾಗೂ ಎರಡು ತಿಂಗಳುಗಳ ಜೈಲುವಾಸ ಅನುಭವಿಸಬೇಕಾಗುತ್ತದೆ ಹಾಗೂ ಈ ಗವಿಗಳ ಫೋಟೋ ತೆಗೆಯುವುದನ್ನೂ ನಿಷೇಧಿಸಿದ್ದಾರೆ.

*(ಮುಂದುವರೆಯುವುದು)*

**ಶ್ರೀವಾಣಿ**

ವಿಶ್ರಾಂತಿ ಎಂದರೆ ಗಂಟೆಗಟ್ಟಲೆ ಹಾಸಿಗೆಯ<br>
ಮೇಲೆ ಬಿದ್ದಿರುವುದಲ್ಲ. ಹರಟೆಯಲ್ಲಿ ದಿನವೆಲ್ಲಾ<br>
ನಿರತವಾಗಿರುವುದಲ್ಲ. ಒಂದು ಕೆಲಸದಲ್ಲಿ<br>
ಬೇಜಾರಾದರೆ, ಮತ್ತೊಂದರಲ್ಲಿ ತೊಡಗುವುದು.<br>
ಅದನ್ನು ಮಾಡಿ ಬೇಜಾರಾದರೆ<br>
ಮಗುದೊಂದರಲ್ಲಿ ತೊಡಗುವುದು.<br>
ಕರ್ಮ ವಿಚ್ಛಿತ್ತಿ ವಿಶ್ರಾಂತಿಯಲ್ಲ,<br>
ಕರ್ಮಪಲ್ಲಟವೇ ವಿಶ್ರಾಂತಿ.

# ಬಸವಣ್ಣನವರ ಕಾನೂನು ದೃಷ್ಟಿ

– ಎಸ್.ಎಂ. ಸೋಮಶೇಖರಪ್ಪ
ವಕೀಲರು, ತುಮಕೂರು.

ಹನ್ನೆರಡನೆಯ ಶತಮಾನದ ಮಹಾನ್ ವ್ಯಕ್ತಿ ಬಸವಣ್ಣನವರ ಬಗ್ಗೆ ಬಹಳಷ್ಟು ಜನ ಸಾಹಿತಿಗಳು, ವಿದ್ವಾಂಸರು, ಮಠಾಧಿಪತಿಗಳು, ಅವರ ವ್ಯಕ್ತಿತ್ವದ ಬಗ್ಗೆ ಮಾತನಾಡುತ್ತಿರುವುದನ್ನು ಕೇಳುತ್ತಿದ್ದೇವೆ. ಭಕ್ತಿ ಭಂಡಾರಿ ಬಸವಣ್ಣನವರು ಕಾಯಕ ತತ್ವವನ್ನು ಪ್ರತಿಪಾದಿಸಿದ, ಮಹಾ ಶರಣ, ಮಹಾ ಮಾನವತಾವಾದಿ, ಸಮಾಜ ಸುಧಾರಕ. ಬ್ರಾಹ್ಮಣ ಕುಲದಲ್ಲಿ ಜನಿಸಿದ ಬಸವಣ್ಣನವರು, ವೀರಶೈವ ಧರ್ಮದ ಹಿರಿಮೆ, ವೈಶಿಷ್ಟ್ಯಗಳನ್ನು ಚಿಕ್ಕ ವಯಸ್ಸಿನಲ್ಲಿಯೇ ಅರ್ಥಮಾಡಿಕೊಂಡು ವೀರಶೈವ ದೀಕ್ಷೆಯನ್ನು ಪಡೆದುಕೊಂಡು ಮೊದಲು ಭಕ್ತಿ ಭಂಡಾರಿ ಎನಿಸಿಕೊಂಡು ನಂತರ ಸಾರ್ವಜನಿಕ ಕ್ಷೇತ್ರದಲ್ಲಿ ಅತ್ಯುನ್ನತ ಸೇವೆ ಸಲ್ಲಿಸಿರುವುದನ್ನು ನಾವು ಸದಾ ನೆನೆಪಿಸಿಕೊಳ್ಳುತ್ತೇವೆ.

ತನ್ನ ವೃತ್ತಿ ಜೀವನವನ್ನು ಕರಣಿಕನಾಗಿ ಪ್ರಾರಂಭಿಸಿ ಬಿಜ್ಜಳರಾಜನ ಮುಖ್ಯಮಂತ್ರಿಯಾಗಿ ರಾಜ್ಯದಲ್ಲಿ ಹಲವಾರು ವರ್ಷಗಳ ಕಾಲ ಮನುಕುಲ ಅಭಿವೃದ್ಧಿಗೆ ಶ್ರಮಿಸಿ ಭರತಖಂಡದ ಇತಿಹಾಸದಲ್ಲಿ ಹಚ್ಚ ಹಸಿರಾಗಿದ್ದಾರೆ.

ನಮ್ಮ ದೇಶಕ್ಕೆ ಸ್ವಾತಂತ್ರ್ಯ ಬಂದ ನಂತರ ಮಹಾತ್ಮಗಾಂಧಿ, ನೆಹರೂ, ವಲ್ಲಬಾಯಿಪಟೇಲ್, ಅಂಬೇಡ್ಕರ್ ಮೊದಲಾದವರು ದೀರ್ಘವಾಗಿ ಯೋಚಿಸಿ ನಮ್ಮ ದೇಶಕ್ಕೆ ಎಂತಹ ಆಡಳಿತ ಕ್ರಮ ಇರಬೇಕು ಎಂಬ ವಿಚಾರವನ್ನು ಚರ್ಚಿಸಿ ಪ್ರಜಾಪ್ರಭುತ್ವವೇ ಉತ್ತಮ ಎಂದು ತೀರ್ಮಾನಿಸಿ ಪ್ರಜೆಗಳಿಂದ ಒಪ್ಪಲ್ಪಟ್ಟ ರಾಜ್ಯಾಂಗವನ್ನು ೧೯೫೦ರಲ್ಲಿ ರಚಿಸಿ ಜಾರಿಗೆ ತಂದಿರುವುದು ತಮ್ಮೆಲ್ಲರಿಗೂ ತಿಳಿದಿರುವ ವಿಚಾರ.

೧೨ನೇ ಶತಮಾನದಲ್ಲಿ ಬಸವಣ್ಣನವರು ಮಹಾಮಂತ್ರಿಯಾದ ನಂತರ ರಾಜ್ಯಾಡಳಿತದ ಬಗ್ಗೆ ಲಿಖಿತ ಕಾನೂನು ಇರಬೇಕೆಂಬ ಬಗ್ಗೆ ಬಹಳವಾಗಿ ಚಿಂತಿಸಿದ್ದಾರೆ ಎಂಬುದು ನನ್ನ ಅಭಿಪ್ರಾಯ. ಸಮಾಜದಲ್ಲಿ ಶಾಂತಿ ಸುವ್ಯವಸ್ಥೆ ಕಾಪಾಡಲು ದುಷ್ಟರನ್ನು ಶಿಕ್ಷಿಸುವ, ಶಿಷ್ಟರನ್ನು ರಕ್ಷಿಸುವ ಕಾನೂನು ವ್ಯವಸ್ಥೆ ಇರಬೇಕೆಂದು ಚಿಂತಿಸಿದ್ದಾರೆ. ಅದಕ್ಕೆ ಕೆಲವು ಉದಾಹರಣೆಗಳನ್ನು ಇಲ್ಲಿ ಕೊಡಲು ಬಯಸುತ್ತೇನೆ.

೧. ಬಿಜ್ಜಳನ ಆಸ್ಥಾನದ ಮಹಾಮಂತ್ರಿ ಪದವಿ ಖಾಲಿ ಇತ್ತು, ಆ ಕಾಲದಲ್ಲಿ ಘೋರಕ್ಷಾಮ, ಪ್ರಜೆಗಳಿಗೆ ಆಹಾರವಿಲ್ಲ, ದನಕರುಗಳಿಗೆ ಮೇವಿಲ್ಲ, ಮಳೆಯಿಲ್ಲದೆ ಎಲ್ಲೆಲ್ಲೂ ನೀರಿಗೆ ಹಾಹಾಕಾರ, ಕಾರ್ಮಿಕರಿಗೆ ಕೆಲಸವಿಲ್ಲ, ಜೀವ ಉಳಿಸಿ ಕೊಳ್ಳಲು ಜನರು ಗೆಡ್ಡೆ-ಗೆಣಸು ತಿಂದು ಪರಿತಪಿಸುವ ಪರಿಸ್ಥಿತಿ ಉಂಟಾಗಿತ್ತು. ಹೊಟ್ಟೆಗಿಲ್ಲದೆ ಎಷ್ಟೋ ಜನ, ಜಾನುವಾರುಗಳು ಪ್ರಾಣ ಕಳೆದುಕೊಂಡದ್ದು ಉಂಟು. ಬಿಜ್ಜಳನು ಪರಿಸ್ಥಿತಿಯನ್ನು ಚರ್ಚಿಸಲು ಎಲ್ಲಾ ಮಂತ್ರಿಗಳು, ಆಸ್ಥಾನದ ಹಿರಿಯರು, ಪಂಡಿತರುಗಳನ್ನು ಕರೆಸುತ್ತಾನೆ. ಈ ಚರ್ಚೆಯಲ್ಲಿ ಕೊಂಡಿಮಂಚಣ್ಣನಂತಹ ಹಿರಿಯ ಮಂತ್ರಿಯೂ ಸೇರಿದಂತೆ ಅನೇಕರು ರಾಜನಿಗೆ ಸಮಯೋಚಿತ ಸಲಹೆ ಕೊಡಲು ವಿಫಲರಾಗುತ್ತಾರೆ. ಆಗ ಬಿಜ್ಜಳ ಬಸವಣ್ಣನವರ ಅಭಿಪ್ರಾಯ ಕೇಳುತ್ತಾನೆ.

ಪ್ರಕೃತಿ ವಿಕೋಪದಿಂದಾಗುವ ಕ್ಷಾಮಡಾಮರುಗಳು ಯಾವತ್ತೂ ನಮಗೆ ತಪ್ಪಿದ್ದಲ್ಲ. ಇವುಗಳ ನಿವಾರಣೆಗೆ ಶಾಶ್ವತವಾದ ಯೋಜನೆ ಹಾಕಿಕೊಂಡು ಪರಿಹಾರ ಕಾರ್ಯ ನಡೆಯಬೇಕು. ಅದಕ್ಕಾಗಿ ನಿಧಿ ಇಡಬೇಕು. ಬಡವರಿಗೆ ಗಂಜಿ ಕೇಂದ್ರ, ಅನ್ನಸತ್ರ ಸ್ಥಾಪಿಸಬೇಕು. ಜಾನುವಾರುಗಳಿಗೆ ಮೇವು ಒದಗಿಸಬೇಕು ಎಂಬ ಬಸವಣ್ಣನವರ ಸಲಹೆಗಳನ್ನು ಬಿಜ್ಜಳನು ಒಪ್ಪುತ್ತಾನೆ. ಆದರೆ ಇದಕ್ಕೆಲ್ಲಾ ಹಣವೆಲ್ಲಿ ಎಂಬ ಪ್ರಶ್ನೆ ಉದ್ಭವಿಸುತ್ತದೆ. ಅಷ್ಟರಲ್ಲಿ ರಾಜಭಟನೋರ್ವನು ತಂದುಕೊಟ್ಟ ಓಲೆಗರಿಯನ್ನು ಆಸ್ಥಾನದಲ್ಲಿದ್ದ ಮಂತ್ರಿಗಳು, ಪಂಡಿತರುಗಳು ಯಾರೂ ಓದಲಾಗದೆ ಬಸವಣ್ಣನವರು ಓದಿ ಆ ಓಲೆಗರಿಯಲ್ಲಿ ಸೂಚಿಸಿದ್ದಂತೆ ಸಿಂಹಾಸನದ ಪಕ್ಕದಲ್ಲಿ ಗುಂಡಿಯನ್ನು ತೆಗೆಸಿದಾಗ ದೊರಕಿದ ಅಪಾರ ಸಂಪತ್ತಿನಿಂದ ಪರಿಹಾರ ಕಾಮಗಾರಿ ನಡೆಯುತ್ತದೆ. ಇದೇ ಸಂದರ್ಭದಲ್ಲಿ ಬಸವಣ್ಣನವರಿಂದ ಪ್ರಧಾನಮಂತ್ರಿ ಪದವಿ ಸ್ವೀಕಾರ ನಡೆಯುತ್ತದೆ. ಇಂದಿನ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಬರಗಾಲ ಬಂದಾಗ ಕಾನೂನು ರೀತ್ಯಾ ಪರಿಹಾರಕ್ಕಾಗಿ ಹಣ ಬಿಡುಗಡೆ ಮಾಡಿ ವಿನಿಯೋಗಿಸುವುದನ್ನು ನಾವು ನೋಡಿದ್ದೇವೆ. ಅಂದು ಬಸವಣ್ಣನವರು ಹಾಕಿಕೊಟ್ಟ ಜನಪಯೋಗಿ ಕಾರ್ಯಕ್ರಮಗಳು ಇಂದು ಕಾನೂನಿನಡಿಯಲ್ಲಿ ಅನುಷ್ಠಾನಗೊಳ್ಳುತ್ತದೆ.

೨. ಬಸವಣ್ಣನವರು ನೀಡಿದ ಸಲಹೆ ಸೂಚನೆಗಳನ್ನು ಗಮನಿಸಿದಾಗ ಅವರಲ್ಲಿದ್ದ ಅವರ ಕಾನೂನು ಪ್ರಜ್ಞೆಯನ್ನು ನೋಡಬಹುದು. ಸಮಾಜದಲ್ಲಿ ಬಡವಬಲ್ಲಿದ, ಕೀಳು-ಮೇಲು ಇತ್ಯಾದಿ ವ್ಯತ್ಯಾಸ ಇರಬಾರದು. ಎಲ್ಲರೂ ಒಂದೇ ಎಂಬ ಸಮಾನತೆ ಇರಬೇಕು. ಸ್ತ್ರೀಯರಿಗೂ ಪುರುಷರಂತೆ ಎಲ್ಲಾ ಹಕ್ಕು





ಸ್ವಾತಂತ್ರ್ಯ ಇರಬೇಕು ಎನ್ನುವ ದೃಷ್ಟಿಯನ್ನು ಹಾಗೂ ಸಹಕಾರ ತತ್ವ, ಕಾಯಕ, ಧಾರ್ಮಿಕ ಸ್ವಾತಂತ್ರ್ಯ ಈ ತತ್ವಗಳನ್ನು ನಾವು ಅವರಲ್ಲಿ ಕಾಣಬಹುದಾಗಿದೆ. ಇಂದಿನ ನಮ್ಮ ರಾಜ್ಯಾಂಗದಲ್ಲಿ (Constitution of India) ಅಳವಡಿಸಿರುವ ಪರಿಚ್ಛೇದದ (Chapter)ದಲ್ಲಿ ಮೂಲಭೂತ ಹಕ್ಕು (Fundamental Rights) ಸೇರಿಸಲು ನಮ್ಮ ನಾಯಕರು ಹಾಗೂ ರಾಜ್ಯಾಂಗವನ್ನು ರಚಿಸಿದ ಕರ್ತೃಗಳಿಗೆ ಬಸವಣ್ಣನವರ ಆದರ್ಶಗಳೇ ಮಾರ್ಗದರ್ಶನ. ಕಾರಣ ಅಸ್ಪೃಷ್ಯತೆ ನಿವಾರಣೆಗೆ ಅಂತರ ಜಾತಿ ವಿವಾಹದ ಬಗ್ಗೆ ಬಸವಣ್ಣನವರು ಬಹಳ ಹೋರಾಡಿದ್ದಾರೆ. ಹರಳಯ್ಯನ ಮಗನಿಗೆ ಮಧುವರಸನ ಮಗಳನ್ನು ಕೊಟ್ಟು ವಿವಾಹ ನಡೆಸಿದ್ದು ಅಂದಿನ ಸನಾತನ ಧರ್ಮಿಗಳ ದೃಷ್ಟಿಯಲ್ಲಿ ಅಪರಾಧವಾಗಿದ್ದರೂ ಬಸವಣ್ಣನವರು ಧೈರ್ಯದಿಂದ ಕಾರ್ಯರೂಪಕ್ಕೆ ತಂದಿದ್ದಾರೆ. ಅಂದಿನ ಸಮಾಜ ಮತ್ತು ಬಸವಣ್ಣನವರ ವಿರೋಧಿಗಳು ಈ ಆದರ್ಶವನ್ನು ಸ್ವೀಕರಿಸಲು ಸಿದ್ಧವಿರಲಿಲ್ಲ. ವಿರೋಧಿಗಳ ಪ್ರಾಬಲ್ಯ ಜಾಸ್ತಿ ಇದ್ದು ಅದು ಹರಳಯ್ಯ ಮಧುವರಸರ ಮರಣದಂಡನೆಗೆ ಒಳಗಾಗಿದ್ದು ಇತಿಹಾಸ. ಆದರೆ ಇಂದಿನ ರಾಜ್ಯಾಂಗದಲ್ಲಿ ಬಸವಣ್ಣನವರ ಈ ತತ್ವಗಳನ್ನು ಅಳವಡಿಸಿಕೊಳ್ಳಲಾಗಿದೆ. ಹರಿಜನರ ಜೊತೆ ಸವರ್ಣೀಯರ ವಿವಾಹ ಪದ್ಧತಿಯನ್ನು ಇಂದಿನ ಸರ್ಕಾರಗಳು ಕಾನೂನಿನ ಚೌಕಟ್ಟಿನಲ್ಲಿ ಪ್ರೋತ್ಸಾಹಿಸುತ್ತಾ ಇವೆ. ಇದಕ್ಕಾಗಿ ಹಣವನ್ನು ಕೊಡುವುದು, ಸರ್ಕಾರಿ ಕೆಲಸ ಕೊಡಿಸುವುದು ಇತ್ಯಾದಿ ಸೌಲಭ್ಯಗಳನ್ನು ಒದಗಿಸುತ್ತಿದ್ದಾರೆ. ಈ ತತ್ವವನ್ನು ೧೨ನೇ ಶತಮಾನದಲ್ಲೇ ಬಸವಣ್ಣನವರು ಮಾಡಿ ತೋರಿಸಿದ್ದಾರೆ.

೩. ''ಕಳಬೇಡ ಕೊಲಬೇಡೆ ಹುಸಿಯ ನುಡಿಯಲು ಬೇಡ'' ಎಂಬ ಬಸವಣ್ಣನವರ ವಚನದಲ್ಲಿ ಮನುಷ್ಯನು ಮಾಡುವ ಕೆಲವು ಅಪರಾಧಗಳ ಬಗ್ಗೆ ಇದೆ. ಇಂತಹ ಅಪರಾಧಗಳಿಗೆ ಶಾಸನ ರೂಪದಲ್ಲಿ ಶಿಕ್ಷೆಗೆ ಗುರಿಪಡಿಸಬೇಕೆಂಬ ಕಾನೂನು ದೃಷ್ಟಿ ಬಸವಣ್ಣನವರಲ್ಲಿತ್ತು. ಮೇಲೆ ಹೇಳಿದ ಭಾರತೀಯ ದಂಡಸಂಹಿತೆಯ ಕಲಂ ೩೭೮, ೩೭೯ರಲ್ಲಿ ಕಳ್ಳತನ ಮಾಡುವುದು ಅಪರಾಧ. ಶಿಕ್ಷಾರ್ಹ. ಕಲಂ ೩೦೨ರಲ್ಲಿ ಕೊಲೆ ಮಾಡಿದವರಿಗೆ ಶಿಕ್ಷೆ ಉಂಟು. ಹಾಗೆಯೇ ಸುಳ್ಳು ಹೇಳುವುದೂ ಅಪರಾಧ, ಶಿಕ್ಷಾರ್ಹ. ಆದರೆ ಅಂತಹ ಕಾನೂನನ್ನು ಮಾಡಿ ಜಾರಿಗೆ ತರಲು ಅಂದು ಬಸವಣ್ಣನ ವಿರೋಧಿಗಳು, ಪಟ್ಟಭದ್ರಹಿತಾಸಕ್ತರು ಅವಕಾಶ ಕೊಟ್ಟಿರಲಾರರು. ಸಮಾಜ ವಿರೋಧಿಗಳು ದೇಶದ್ರೋಹ ಚಟುವಟಿಕೆಗಳಲ್ಲಿ ನಿರತರಾದ ದೇಶದ್ರೋಹಿಗಳನ್ನು ಬಸವಣ್ಣನವರು ಕಂಡಿದ್ದಾರೆ. ಆದರೆ ಅವನ್ನು ನಿಗ್ರಹಿಸಲು ಪ್ರೋತ್ಸಾಹ ಇಲ್ಲದ್ದನ್ನು ನಾವು ಕಾಣುತ್ತೇವೆ. ದೇಶದ್ರೋಹದ ಬಗ್ಗೆ ನಮ್ಮಲ್ಲಿ ಬಹಳ ನಿದರ್ಶನಗಳಿವೆ. ಕಿತ್ತೂರು ರಾಣಿ ಚೆನ್ನಮ್ಮ, ಶ್ರೀ ಕೃಷ್ಣದೇವರಾಯ ಇವರು ಗಳ ಕಾಲದಲ್ಲಿ ಮದ್ದಿಗೆ ಸಗಣಿ ಬೆರೆಸಿ ಶತ್ರುಗಳಿಗೆ ಒಳಸಂಚಿನಿಂದ ಸಹಾಯ ಮಾಡಿದ ನಮ್ಮವರೇ ಆದ ದೇಶದ್ರೋಹಿಗಳ ಬಗ್ಗೆ ನಾವು ಚರಿತ್ರೆಯಲ್ಲಿ ಓದಿದ್ದೇವೆ. ಸಮಾಜ ದ್ರೋಹ ಹತ್ತಿಕ್ಕಲು ಅಂತಹ ಕಾನೂನು ತರಲು ೧೨ನೇ ಶತಮಾನದಲ್ಲಿ ಬಸವಣ್ಣನವರಿಗೆ ವಿರೋಧ ವಿದ್ದುದರಿಂದಲೇ ಅವರು ವಚನಗಳ ಮೂಲಕ ಜನರನ್ನು ತಿದ್ದಲು ಪ್ರಯತ್ನಿಸಿರುವುದನ್ನು ಗಮನಿಸಬಹುದು. ಮೋಸ, ಕೊಲೆ, ವಂಚನೆ, ದೇಶದ್ರೋಹ, ಇವೆಲ್ಲವೂ ಮೇಲೆ ಹೇಳಿದ ಕಾಯಿದೆಗಳಲ್ಲಿ ಶಿಕ್ಷಾರ್ಹ ಅಪರಾಧ. ಇಂತಹ ಕಾನೂನು ದೃಷ್ಟಿಯನ್ನು ಹಲವಾರು ವಚನಗಳಲ್ಲಿ ಕಾಣಬಹುದಾಗಿದೆ.

೪. ಬಸವಣ್ಣನವರು ಸ್ತ್ರೀಯರ ಬಗ್ಗೆ ಅಂದಿನ ಸಮಾಜ ತೋರುತ್ತಿದ್ದ ಧೋರಣೆಯ ಬಗ್ಗೆ ಬಹಳಷ್ಟು ಚಿಂತಿಸಿದ್ದಾರೆ. ಸ್ತ್ರೀಯರಿಗೂ ಪುರುಷರಂತೆ ಸಮಾನಹಕ್ಕು, ಸ್ವಾತಂತ್ರ್ಯ ಇರಬೇಕು. ಶೋಷಣೆ ನಿಲ್ಲಬೇಕು. ಇದನ್ನು ಕಾನೂನು ರೂಪದಲ್ಲಿ ಏಕೆ ತರಬಾರದು ಎಂಬ ಚಿಂತೆ ಬಸವಣ್ಣನವರನ್ನು ಕಾಡಿದೆ. ಅನುಭವಮಂಟಪದಲ್ಲಿ ಸ್ತ್ರೀ ಪುರುಷರೆಲ್ಲರಿಗೂ ಸಮಾನ ಅವಕಾಶ; ಪೂರ್ಣ ಸ್ವಾತಂತ್ರ್ಯ ಅಷ್ಟೇ ಗೌರವವನ್ನು ಸ್ತ್ರೀಯರಿಗೆ ತೋರಿಸಿರುವುದನ್ನು ಕಾಣುತ್ತೇವೆ. ನಮ್ಮ ಇಂದಿನ ರಾಜ್ಯಾಂಗದಲ್ಲಿ ಸ್ತ್ರೀಯರಿಗೆ ಕಲ್ಪಿಸಿರುವ ಸಮಾನ ಹಕ್ಕು (Equal Right) ಗಳ ಬಗ್ಗೆ ತಿಳಿದಿದ್ದೇವೆ. ಇತ್ತೀಚಿನ ಬೆಳವಣಿಗೆಯ ಪ್ರಕಾರ ಎಲ್ಲಾ ಕ್ಷೇತ್ರಗಳಲ್ಲೂ ಸ್ತ್ರೀಯರಿಗೆ ಶೇಕಡ ೩೩ರಷ್ಟು ಸ್ಥಾನ ಮೀಸಲಿಡಲು ಪಾರ್ಲಿಮೆಂಟಿನಲ್ಲಿ ಚರ್ಚೆ ಆಗಬೇಕಾಗಿರುವುದನ್ನು ನಾವು ಇಲ್ಲಿ ಸ್ಮರಿಸಬಹುದು. ಉಳುವವನಿಗೇ ಜಮೀನು ಇರಬೇಕೆಂಬುದು ಹಾಗೂ ಸಮಾಜದಲ್ಲಿ ಶೋಷಣೆ ಇರಬಾರದು ಎಂಬ ಕಲ್ಪನೆ ಬಸವಣ್ಣನವರಲ್ಲಿತ್ತು. ಅವರ ಆದರ್ಶಗಳ ಪ್ರತಿಫಲವೋ ಎಂಬಂತೆ ಇಂದು ನಮ್ಮ ರಾಜ್ಯಗಳಲ್ಲಿ ಭೂ ಶಾಸನ (Land Reforms Act) Debt Relief Act), ಋಣಪರಿಹಾರ ಕಾಯ್ದೆ ಇತ್ಯಾದಿ ಸಾರ್ವಜನಿಕ ಹಿತದೃಷ್ಟಿಯ (Social Legistations) ಕಾಯಿದೆಗಳು ಜಾರಿಗೆ ಬಂದಿವೆ. ಇಂತಹ ಹಲವಾರು ಕಾಯಿದೆಗಳು ಜಾರಿಗೆ ಬರುವುದಕ್ಕೆ ೧೨ನೇ ಶತಮಾನದ ಬಸವಣ್ಣನವ ಆದರ್ಶಗಳೇ ಮೂಲ ಪ್ರಚೋದನೆಗೆ ಕಾರಣ ಎಂಬುದು ನನ್ನ ಅಭಿಪ್ರಾಯ. ಬಸವಣ್ಣನವರು ಸಮಾಜ ಸುಧಾರಣೆ ಬಗ್ಗೆ ಬಹಳಷ್ಟು ಚಿಂತಿಸಿದ್ದರು. ಆ ಎಲ್ಲಾ ಕಲ್ಪನೆ, ಆದರ್ಶಗಳು ಇಂದು ನಮ್ಮ ದೇಶದಲ್ಲಿ ಈಗ ಜಾರಿಯಲ್ಲಿರುವ ಕಾನೂನುಗಳಲ್ಲಿ ಒಂದಲ್ಲ ಒಂದು ರೂಪದಲ್ಲಿ ಅಳವಡಿಸಲ್ಪಟ್ಟಿವೆ. ಇಂದು ಬಸವಣ್ಣನವರ ಆದರ್ಶಗಳನ್ನು ಸಂಪೂರ್ಣವಾಗಿ ಅಳವಡಿಸಿಕೊಂಡು ಸಂಪೂರ್ಣವಾಗಿ ಅನುಷ್ಠಾನಗೊಳಿಸಿದ್ದಾರೆ.

# ಮಕ್ಕಳಿಗೆ ಮನೆಯೇ ಮೊದಲ ಪಾಠಶಾಲೆ

– ಎಂ.ಎಂ. ಸಜ್ಜನರ್

ಮಗುವಿಗೆ ತಾನು ಹುಟ್ಟಿದ ಮನೆಯೇ ಮೊದಲ ಪಾಠಶಾಲೆ ಹಾಗೂ ಜನ್ಮನೀಡಿದ ತಾಯಿಯು ಪ್ರಥಮ ಗುರುವಾಗಿರುತ್ತಾಳೆ. ತಾಯಿಯಿಂದ ದೊರೆತ ಶಿಕ್ಷಣ ಮಗುವಿನ ವ್ಯಕ್ತಿತ್ವ ವಿಕಾಸವಾಗಲು ಬಹಳಷ್ಟು ಕಾರಣವಾಗುತ್ತದೆ. ಬಾಲ್ಯಾವಸ್ಥೆಯಲ್ಲಿ ಶೀಲ ಹಾಗೂ ಶಕ್ತಿ ಬೆಳೆದು ವಿಕಾಸ ವಾಗುವಷ್ಟು ಶೀಘ್ರವಾಗಿ ಮುಂದೆ ಆಗಲಾರದು. ತಾಯಿ ಯಾದವಳು ಈ ಉತ್ತಮ ಅವಕಾಶವನ್ನು ಸದುಪಯೋಗ ಪಡಿಸಿಕೊಂಡು ಮಗುವಿಗೆ ಒಳ್ಳೆಯ ಮಾರ್ಗದರ್ಶನ ನೀಡಬೇಕು.

ಮಗುವಿನ ಪ್ರತಿಯೊಂದು ಚಟುವಟಿಕೆ ಮುಂದೆ ರೂಢಿಯಾಗಿ ಅದು ಸ್ಥಿರವಾಗಿ ನಿಲ್ಲುವುದು. ಕಾರಣ ಕೆಟ್ಟ ರೀತಿಯ ಚಟುವಟಿಕೆಗಳು ಮಗುವಿನಲ್ಲಿ ಕಂಡುಬಂದರೆ ಪ್ರೀತಿಯ ಮಾತುಗಳಿಂದ ಮಗುವಿಗೆ ತಿಳಿಸಿ ಹೇಳಬೇಕು. ಇದು ತಾಯಿ ತಂದೆಯರ ಪವಿತ್ರವಾದ ಕರ್ತವ್ಯ.

ಮಗುವಿಗೆ ಉತ್ತಮ ಸನ್ನಿವೇಶ ಕಲ್ಪಿಸಿಕೊಟ್ಟು, ಮಗು ಉತ್ತಮ ಚಟುವಟಿಕೆಯಲ್ಲಿ ಭಾಗವಹಿಸುವಂತೆ ಮಾಡಿದರೆ ಭವಿಷ್ಯ ಉತ್ತಮವಾಗುವುದು. ಇಂತಹ ಒಳ್ಳೆಯ ವಾತಾವರಣ ದಲ್ಲಿ ಮಗುವು ಸ್ವಂತ ಅನುಭವದಿಂದ ಕಲಿತುಕೊಳ್ಳುವುದು ಮತ್ತು ಮಗುವಿನಲ್ಲಿ ಸ್ಪರ್ಧಾತ್ಮಕ ಮನೋಭಾವ ಬೆಳೆಯು ವುದನ್ನು ಗಮನದಲ್ಲಿಟ್ಟುಕೊಂಡು ವರ್ತಿಸುವುದು ಮಗುವಿನ ಭವಿಷ್ಯದ ದೃಷ್ಟಿಯಿಂದ ಉತ್ತಮ.

ಮಕ್ಕಳಲ್ಲಿ ಅನುಕರಣೆಯ ಗುಣವು ಪ್ರಬಲವಾಗಿರು ತ್ತದೆ. ತಂದೆ ತಾಯಿಗಳ ನಡೆನುಡಿಗಳು ಮಕ್ಕಳ ಮೇಲೆ ಹೆಚ್ಚಿನ ಪರಿಣಾಮ ಬೀರುವಂತೆ ಮಾಡಲು ಉತ್ತಮ ಅವಕಾಶಗಳನ್ನು ಕಲ್ಪಿಸಿಕೊಡಬೇಕು. ಆದ್ದರಿಂದ ತಂದೆ ತಾಯಿಯರು ಮತ್ತು ಹಿರಿಯರು ಮಕ್ಕಳೊಂದಿಗೆ ಎಚ್ಚರಿಕೆಯಿಂದ ನಡೆದುಕೊಳ್ಳು ವುದು ಅವಶ್ಯ. ಮಕ್ಕಳಿರುವ ಮನೆಯಲ್ಲಿ ತಂದೆ ತಾಯಿ ಹಿರಿಯರು ತಮ್ಮ ನಡೆ ನುಡಿಗಳನ್ನು ಆದರ್ಶಪ್ರಾಯವಾಗಿರು ವಂತೆ ಮತ್ತು ಶಿಸ್ತು ಮನೋಭಾವನೆ ಬೆಳೆಯುವಂತೆ ನಡೆದು ಕೊಳ್ಳಬೇಕು.

ಮನೆಯ ವಾತಾವರಣದಲ್ಲಿ ಸಿಗುವ ಅನುಭವಗಳು ಮಗುವಿನ ವ್ಯಕ್ತಿತ್ವ ರೂಪುಗೊಳ್ಳಲು ಸಹಾಯವಾಗುತ್ತದೆ. ಮಗು ಸದಾಕಾಲ ಸ್ವಚ್ಛವಾಗಿರಬೇಕೆಂಬುದನ್ನು ಪ್ರೀತಿ ವಾತ್ಸಲ್ಯ ದಿಂದ ಮಗುವಿಗೆ ಸ್ವಚ್ಛತೆಯ ಬಗ್ಗೆ ತಿಳುವಳಿಕೆ ಮಾಡಿಕೊಡು ವುದರಿಂದ ಬರಬರುತ್ತ ಮಗು ತನ್ನನ್ನು ತಾನು ತಿದ್ದಿಕೊಂಡು ಸ್ವಚ್ಛತೆಯಿಂದ ಇರಲು ಪ್ರಯತ್ನಿಸುವುದು.

ಆಟವಾಡುವಾಗ ಮಗುವು ಎಡವಿ ಬಿದ್ದರೆ ಕನಿಕರ ತೋರಿಸುವುದು ಸರಿಯಲ್ಲ, ಹಾಗೆ ಮಗು ಬಿದ್ದಾಗ ಹೆಚ್ಚಾಗಿ ಪೆಚ್ಚಾಗಿರದು ಎಂಬ ಮಾತಿನೊಂದಿಗೆ ಮಗುವನ್ನೂ ಪ್ರೀತಿ ಯಿಂದ ಪ್ರೋತ್ಸಾಹಿಸುವುದು ಸರಿಯಾದ ಕ್ರಮ. ಉತ್ಸಾಹ ಶೀಲ ಹಾಗೂ ಕ್ರಿಯಾಶೀಲವಾದ ಮಗು ಪೆಟ್ಟನ್ನು ಕಡೆಗಾಣಿಸಿ ಆಟವನ್ನು ಮುಂದುವರೆಸುತ್ತದೆ. ನಡೆಯುವವನು ಎಡವಿಯಾನು ಎಂಬ ಗಾದೆಯ ಅರ್ಥ ಮಾಡಿಕೊಂಡರೆ ತಂದೆ ತಾಯಿಯರಿಗೆ ಮಕ್ಕಳಿಗೆ ಅನಗತ್ಯವಾಗಿ ಆತಂಕ ವ್ಯಕ್ತಪಡಿಸಬಾರದು ಎಂಬ ತಿಳುವಳಿಕೆ ಬರುವುದು.

ಒಟ್ಟಿನಲ್ಲಿ ಹೇಳಬೇಕೆಂದರೆ ಮಕ್ಕಳ ಬುದ್ಧಿ ಸಾಮಾನ್ಯ ವಾಗಿ ಕಿಡಿಗೇಡಿತನದಿಂದ ಕೂಡಿರುತ್ತದೆ. ಯಾವುದು ಮಾಡಬೇಡ ಎಂದು ತಂದೆತಾಯಿಗಳು ಹೇಳಿರುತ್ತಾರೆಯೋ ಅಂಥ ಕೆಲಸವನ್ನು ತಂದೆ ತಾಯಿಗಳ ಕಣ್ಣುತಪ್ಪಿಸಿ ಬೇಗನೆ ಮಾಡಿರುತ್ತಾರೆ. ಅದು ಗೊತ್ತಾದ ಮೇಲೆ ತಂದೆತಾಯಿಗಳು ಸಿಟ್ಟಿಗೇಳದೆ ಮಕ್ಕಳನ್ನು ಗದರಿಸದೆ ಉಪಾಯವಾಗಿ ಮಗುವಿನ ಮನಸ್ಸನ್ನು ಬೇರೆ ಕಡೆಗೆ ತಿರುಗಿಸುವ ಪ್ರಯತ್ನ ಮಾಡುವುದು ಉತ್ತಮ ಮಕ್ಕಳನ್ನು ಗದರಿಸುವುದರಿಂದ ನಿಮ್ಮ ಉದ್ದೇಶ ಸಫಲವಾಗ ಲಾರದು. ಅದಕ್ಕೆ ಪ್ರತಿಯಾಗಿ ನಿಮ್ಮ ಮಾತನ್ನು ಧಿಕ್ಕರಿಸುವ ಮನಸ್ಸನ್ನು ಮಗು ಬೆಳೆಸಿಕೊಳ್ಳುವುದು. ಚಟುವಟಿಕೆ ಯಿಂದ ಕೂಡಿದ ಮಗು ಚೇಷ್ಟೆ ಮಾಡುವುದು ಸಹಜ. ಇಂಥ ಗುಣವನ್ನು ಗಮನಿಸಿದ ತಂದೆ ತಾಯಿಗಳು ಮಗುವಿನ ಮನಸ್ಸನ್ನು ಬೇರೆ ವಿಷಯದ ಕಡೆಗೆ ಹರಿಯುವಂತೆ ಮಾಡಲು ಪ್ರಯತ್ನಿಸುವುದು ಉತ್ತಮ.

*







# ಪರಿಸರ ಹಾಗೂ ಜನಸಂಖ್ಯೆ

– ಡಾ. ಸ.ಜ. ನಾಗಲೋಟಿಮಠ
ವೈದ್ಯಕೀಯ ನಿರ್ದೇಶಕರು,
ಬಿ.ವಿ.ವಿ. ಬಾಗಲಕೋಟೆ

ಅಂದಾಜು ೨೦ ವರ್ಷಗಳು ಆಗಿರಬಹುದು. ನಾನು ಒಂದು ಆರೋಗ್ಯ ಕೇಂದ್ರವನ್ನು ಉದ್ಘಾಟಿಸಲು ಹೋಗಿದ್ದೆ. ಸಮಾರಂಭದ ಅಧ್ಯಕ್ಷತೆಯನ್ನು ಸಮೀಪದ ಊರಿನ ಸ್ವಾಮಿಗಳು ವಹಿಸಬೇಕಾಗಿತ್ತು. ಸಮಾರಂಭ ಪ್ರಾರಂಭವಾಗಲು ಇನ್ನೂ ವಿಳಂಬವಿತ್ತು. ಕಾರಣ ನನ್ನನ್ನೂ ಸ್ವಾಮಿಗಳನ್ನೂ ಒಂದು ಕೊಠಡಿ ಯಲ್ಲಿ ಕೂಡ್ರಿಸಿದ್ದರು. ಇಬ್ಬರೂ ಮಾತನಾಡುತ್ತ ಕುಳಿತಿದ್ದೆವು. ಮಾತಾಡುತ್ತಿರುವಾಗ ಸ್ವಾಮಿಗಳು ಗಂಭೀರರಾದರು, ನನ್ನ ಕಡೆಗೆ ನೋಡುತ್ತ ಕೇಳಿದರು. ಸಾಹೇಬ್ರ, ಸರಕಾರದವರು ಏನೆಲ್ಲ ಪ್ರಯತ್ನ ಮಾಡುತ್ತಿರುವರು. ಏನೇ ಮಾಡಲಿ ಜನಸಂಖ್ಯೆ ನಿಯಂತ್ರಣದಲ್ಲಿ ಬರಬಹುದೇ?

ನನಗೂ ಇದು ವಿಚಿತ್ರ ಎನಿಸಿತು. ಈ ಸ್ವಾಮಿಗಳೋ ಬ್ರಹ್ಮಚಾರಿಗಳು. ಅವರಿಗೆ ಹಿಂದಿಲ್ಲ ಮುಂದಿಲ್ಲ ಇವರಿಗೇಕೆ ಈ ಕುಟುಂಬ ಕಲ್ಯಾಣದ ಚಿಂತೆ ಅನಿಸಿತು. ವಿಚಾರಿಸುತ್ತಿರುವವನಂತೆ ನಟಿಸುತ್ತ ಸುಮ್ಮನೆ ಕುಳಿತೆ. ಸ್ವಾಮಿಗಳು ಸುಮ್ಮನಾಗಲಿಲ್ಲ. ಮತ್ತೆ ಕೆದಕಿ ಕೇಳಿದರು. ಏನ್ರಿ ಡಾಕ್ಟ್ರ ನಮ್ಮ ಪ್ರಶ್ನೆಗೆ ನೀವು ಉತ್ತರಿಸಲಿಲ್ಲ. ನಾನು ಧೈರ್ಯದಿಂದಲೇ ಅವರಿಗೆ ಮರುಪ್ರಶ್ನೆ ಹಾಕಿದೆ. ಸ್ವಾಮೀಜಿ, ನಾಗರಿಕರೆಲ್ಲರೂ ಮನಸ್ಸು ಮಾಡಿದರೆ ಖಂಡಿತ ಜನಸಂಖ್ಯೆ ನಿಯಂತ್ರಣ ಸಾಧ್ಯ. ಅವರು ನನ್ನ ಕಡೆಗೆ ನೋಡಿ ನಗೆಹತ್ತಿದರು. ನನಗೆ ಗೊಂದಲ ಇವರಿಗೆ ಏನು? ಧೈರ್ಯಮಾಡಿ ಕೇಳಿದೆ. ಯಾಕೆ ಸ್ವಾಮೀಜಿ ಜನಸಂಖ್ಯೆ ನಿಯಂತ್ರಣ ಸಾಧ್ಯವಿಲ್ಲ ಎನ್ನುವಿರೋ? ಸ್ವಾಮೀಜಿ ಅದು ಹೇಗೆ ಸಾಧ್ಯ? ಎಂದರು. ನಾನು ಹೇಳಿದೆ ಗುರುಗಳೇ ನಿಮ್ಮ ವಿಚಾರವೇನು? ಅವರು ಹೇಳಿದರು ನೋಡ್ರಿ, ಡಾಕ್ಟ್ರೆ. ನೀವು ವಿಜ್ಞಾನಿಗಳು ಅಹುದೋ ಅಲ್ಲವೋ? ನಾನು ಅಹುದು ಎಂದೆ.

ಸ್ವಾಮೀಜಿ : ಗಿಡಗಳಿಗೆ ಜೀವ ಇದೆ ಎಂದು ಜಗತ್ತಿಗೆ ತೋರಿಸಿದವರು ನಮ್ಮ ದೇಶದವರೇ ಆದ ಜಗದೀಶ್ಚಂದ್ರ ಭೋಸ್ ಅಹುದೋ

ನಾನು : ಅಹುದು

ಸ್ವಾಮೀಜಿ : ಜೀವ ಇದೆ ಎಂದರೆ ಆತ್ಮ ಇರಬೇಕಲ್ಲವೆ?

ನಾನು ಗೊಂದಲದಲ್ಲಿ ಸಿಗುತ್ತಿರುವೆನೆಂದೆನಿಸಿತು. ಆದರೂ ಚರ್ಚೆ ಮುಂದುವರೆಯಬೇಕಲ್ಲವೆ? ಆದರೂ ಸುಮ್ಮನಾದೆ. ಅವರು ಬಿಡಲಿಲ್ಲ.

ಸ್ವಾಮೀಜಿ : ನಿಮಗೆ ಆತ್ಮ ಇಲ್ಲ ಎನಿಸುವುದೋ?

ನಾನು : ಸೋತವನಂತೆ ಹೌದು, ಎಲ್ಲ ಜೀವಿಗಳಿಗೂ ಆತ್ಮ ಇರಲೇಬೇಕು ಎಂದೆ.

ಸ್ವಾಮೀಜಿ : ಅಂದರೆ ಎಲ್ಲ ಗಿಡಮರಗಳಿಗೆ ಆತ್ಮ ಇರುತ್ತದೆ ಎಂದು ನೀವು ನಂಬುತ್ತಿರೋ? ನಾನು ಅಹುದು ಎಂದು ನುಡಿದೆ.

ಸ್ವಾಮೀಜಿ ಕೇಳಿದರು ಡಾಕ್ಟ್ರೆ ಆತ್ಮಕ್ಕೆ ಮರಣ ಇಲ್ಲ ಎಂಬುದನ್ನೂ ನಂಬುವಿರೋ? ಈಗ ಅವರ ಬಲೆಗೆ ಬಿದ್ದಿದ್ದೆ ಹೌದು ಎನ್ನುವುದೊಂದೇ ಮಾರ್ಗ ಉಳಿದಿತ್ತು ಹೌದು ಎಂದೆ.

ಸ್ವಾಮೀಜಿ ನಗುತ್ತಾ ಹೇಳಿದರು; ನೋಡ್ರಿ, ನಿಮ್ಮ ಸರಕಾರದವರು ಒಂದಿಲ್ಲ ಒಂದು ನೆವ ಹೇಳಿ ಪ್ರತಿದಿನ ಲಕ್ಷಗಟ್ಟಲೆ ಗಿಡ ಕಡಿತಾರೆ. ಈ ಗಿಡ ಕಡಿದ್ರೂ, ಅಂದ್ರ, ಗಿಡದ ಜೀವ ತಗದಂಗರಿ. ಗಿಡ ಸತ್ತ ಬಿದ್ದ ಮೇಲೆ ಗಿಡದ ಆತ್ಮ ಎಲ್ಲಿ ಹೋಗಬೇಕ್ರಿ. ಅಲ್ಲೆ ಇಲ್ಲೆ ಸುಳಿದಾಡುತ್ತದೆ. ಅನುಕೂಲ ನೋಡಿಕೊಂಡು ಯಾವುದರ ತಾಯಿ ಹೊಟ್ಟೆಯೊಳಗೆ ಹೋಗಿ ಕುಂಡತ್ತೈತರಿ. ಸಮಯ ಸರಿ ಬಂದಾಗ ಕೂಸಾಗಿ ಹುಟ್ಟತೈತ್ರಿ. ಜನಸಂಖ್ಯಾ ಬೆಳಿತೈತ್ರಿ. ಎಲ್ಲಿತನಕ ನಾವು ಗಿಡಾ ಕಡಿಯುತ್ತ ಹೋಗುವೆವೋ ಅಲ್ಲಿಯವರೆಗೆ ಗಿಡಗಳ ಆತ್ಮ ಮನಶ್ಯಾರ ಹೊಟ್ಟೆ ಸೇರತಾವು ಮಕ್ಕಳಾಗಿ. ಹುಟ್ಟು ಸಾವು ಎಂದು ನೀವು ಗಿಡ ಕಡಿದು ಬಂದ ಮಾಡಸ್ತೀರಿ ಅಂದ ಜನಸಂಖ್ಯಾ ಹೆಚ್ಚಾಗೊದು ನಿಂದರತೈತಿ. ಸ್ವಾಮೀಜಿ ಮುಂದುವರೆದರು. ಹಿಂದಿನ ಕಾಲದಾಗ ದೊಡ್ಡ ದೊಡ್ಡ ಅರಣ್ಯ ಇದ್ದು, ಅರಣ್ಯದಾಗ ಲಕ್ಷಗಟ್ಟಲೇ ಗಿಡ ಇದ್ದು ಆ ಗಿಡದ ಆತ್ಮ ಅಲ್ಲೆ ಕೂಡ್ರುತ್ತಿದ್ದವು. ಆದ್ದರಿಂದ ಆಗ ಜನಸಂಖ್ಯೆ ಕಡಿಮೆ ಇತ್ತು. ಗಿಡದ ಸಂಖ್ಯೆ ಜಾಸ್ತಿ ಇತ್ತು. ಇಂದು ಜನಸಂಖ್ಯೆ ಜಾಸ್ತಿ ಆಗಿದೆ. ಗಿಡಸಂಖ್ಯೆ ಕಡಿಮೆ ಆಗಾತ ಹತ್ತೈತಿ.

ನಾನು ದಂಗು ಬಡಿದಂತೆ ಸುಮ್ಮನೆ ಕುಳಿತೆ. ಸ್ವಾಮೀಜಿ ಹೇಳುವುದರಲ್ಲಿ ಕೆಲವು ಸಂಗತಿಗಳು ನಿಜ ಇವೆ. ಹಿಂದಿನ ಕಾಲದಲ್ಲಿ ಜನಸಂಖ್ಯೆ ಕಡಿಮೆ ಇದ್ದದ್ದು ಸತ್ಯ. ಅರಣ್ಯಗಳು ಹೆಚ್ಚು ಇದ್ದದ್ದು ಸತ್ಯ. ಇಂದು ಈ ಸಂಗತಿ ತಿರುವು ಮುರವು ಆದದ್ದೂ ನಿಜ. ಈಗ ಪ್ರಶ್ನೆ ಎದುರಾದದ್ದು ಸ್ವಾಮಿಗಳ ತರ್ಕ ಸರಿಯೋ ತಪ್ಪೋ? ಯಾರ ಹಿಡಿತದಿಂದ ತಪ್ಪಿಸಿಕೊಳ್ಳುವ ದಾರಿ ಹುಡುಕುತ್ತಿದ್ದೆ. ಕೊನೆಗೆ ಸ್ವಾಮಿಗಳನ್ನು ನೋಡುತ್ತ ಹೇಳಿದೆ ಸ್ವಾಮೀಜಿ, ತಮ್ಮ ತರ್ಕ ಒಂದು ಕಡೆಯಿಂದ ಸರಿ ಎನಿಸುತ್ತದೆ. ಆದರೆ ನೇರವಾಗಿ ಒಪ್ಪಿಕೊಳ್ಳಲೂ ಮನಸ್ಸುಬಾರದು. ಇದಕ್ಕೆ ಕಾರಣವೆಂದರೆ ನಿಮಗೆ ಭೇಟಿಯಾಗುವ ಆತ್ಮಗಳು ನನ್ನನ್ನು ಇನ್ನೂ ಭೇಟಿಯಾಗಿಲ್ಲ. ಅವು ಭೇಟಿಯಾದ ಮೇಲೆ ನಿಮಗೆ ನನ್ನ ಉತ್ತರ ಹೇಳಬಲ್ಲೆ.

❀

# ಪ್ರಾಮಾಣಿಕತೆ

– ಎಂ. ಮಾಧವ ಪೈ
ನಿವೃತ್ತ ಪ್ರಾಂಶುಪಾಲರು,
'ಶ್ರೀನಿವಾಸ', ಡಿ.ವಿ.ಎಸ್. ಹೈಸ್ಕೂಲ್ ಹತ್ತಿರ
ವಿನೋಬನಗರ, ಶಿವಮೊಗ್ಗ– ೫೭೭೨೦೪.

"ಅಕ್ಷೀಣೇವಿತ್ತತಃ ಕ್ಷೀಣೋ ವೃತ್ತತಸ್ತು ಹತೋಹತಃ" – ಧನಹೀನನಾದವನು ಬಡವನೆಂದು ತಿಳಿದುಕೊಳ್ಳಬೇಕಾಗಿಲ್ಲ. ಆದರೆ ಉತ್ತಮ ನಡವಳಿಕೆ, ಸಜ್ಜನಿಕೆಗಳೇ ಮುಖ್ಯವಾಗಿರುವ ಸತ್ಯವರ್ತನೆಯನ್ನು ಕಳೆದುಕೊಂಡರೆ ನಿಜವಾಗಿಯೂ ಆತ ಕ್ಷೀಣನೇ, ಆತ್ಮ ಸತ್ತವನಂತೆಯೇ ಸರಿ ಎನ್ನುತ್ತದೆ ಈ ಸೂಕ್ತಿ. ಮಾನವನ ವ್ಯಕ್ತಿತ್ವಕ್ಕೆ ಕಳೆಬರುವುದು ಸಭ್ಯತೆಯಿಂದ ಉತ್ತಮ ನಡವಳಿಕೆಗಳಿಂದ, ಪ್ರಾಮಾಣಿಕತನದಿಂದ ಎಂಬುದು ಈ ಸೂಕ್ತಿಯಿಂದ ಮನವರಿಕೆಯಾಗುತ್ತದೆ. ಕೊಟ್ಟ ಮಾತಿಗೆ ತಪ್ಪದಿರುವುದು, ಪಡೆದುಕೊಂಡ ಸಾಲವನ್ನು ನಂಬಿಕೆಗೆ ದ್ರೋಹವಾಗದಂತೆ ಮರಳಿಸುವುದು, ತನ್ನ ಪಾಲಿನ ಕರ್ತವ್ಯವನ್ನು ಪರಿಪಾಲನೆ ಮಾಡುವುದು, ಪರರಸೊತ್ತಿಗೆ ಕೈಹಾಕದಿರುವುದು, ಮುಖ್ಯವಾಗಿ ನುಡಿ-ನಡೆ ಒಂದೇಯಾಗಿರುವುದು – ಇವೇ ಮೊದಲಾಗಿ ಜನರ ವಿಶ್ವಾಸಕ್ಕೆ ನ್ಯೂನತೆ ಬಾರದೆ ನ್ಯಾಯ ಧರ್ಮಕ್ಕನುಸಾರವಾಗಿ ನಡೆದು, ಮಮಕಾರಕ್ಕೆ ಬಲಿಯಾಗದೆ ನಡೆಯುವ ಗುಣವೇ ಪ್ರಾಮಾಣಿಕತೆ, ಉತ್ತಮ ನಡಳಿಕೆ, ಪ್ರತಿಯೊಂದಕ್ಕೂ ಅದರದ್ದೇ ಆದ ಒಂದು ಮಾನ, ಮಾಪನ, ರೀತಿ ಇರುತ್ತದೆ. ಆ ಮಾನಕ್ಕೆ ಸರಿಸಮವಾದ ವರ್ತನೆ ಇಲ್ಲದ ಮನುಷ್ಯನು ಬದುಕಿದ್ದರೂ ಮೃತಪ್ರಾಯನೇ ಸರಿ ಎಂಬುದು ಮೇಲಿನ ಸೂಕ್ತಿಯ ಅಂತರಾರ್ಥ. ಶರಣರು ತಮ್ಮ ಬದುಕಿನುದ್ದಕ್ಕೂ ಇದನ್ನೇ ನಡೆಸಿಕೊಂಡು ಬಂದಿದ್ದರಿಂದ ಅವರು ನಡೆ-ನುಡಿಗಳಿಗೆ ಹೆಚ್ಚಿನ ಮಹತ್ವ ನೀಡಿರುವುದನ್ನು ಕಾಣಬಹುದು.

ಆದರೆ ಈ ಸೂಕ್ತಿಯ ಅಂತರಾರ್ಥಕ್ಕೆ ಇಂದು ಒಂದು ಕವಡೆಯ ಬೆಲೆಯೂ ಇಲ್ಲದಂತಾಗಿದೆ ಎಂಬಂತೆ ಇಂದಿನ ಭೌತಿಕ ಪರಿಸರ ಕಲುಷಿತವಾದಂತೆ ಮಾನಸಿಕ ಪರಿಸರವೂ ಮಾಲಿನ್ಯವಾಗಿರುವುದನ್ನು ನಾವು ಕಾಣುತ್ತೇವೆ. ಅಪರೂಪಕ್ಕೆಂಬಂತೆ ಒಮ್ಮೊಮ್ಮೆ – ತನ್ನ ವಾಹನದಲ್ಲಿ ಮರೆತು ಬಿಟ್ಟು ಹೋದ ಪಯಣಿಗನ ಹಣದ ಚೀಲವನ್ನೋ ಅಥವಾ ಇನ್ನಾವುದೋ ವಸ್ತುವನ್ನೋ ಅದರ ಚಾಲಕನು ಸಂಬಂಧಿಸಿದ ವ್ಯಕ್ತಿಗೆ ತಂದು ಒಪ್ಪಿಸಿದನು ಎಂಬ ಸುದ್ದಿ, ಪ್ರಾಮಾಣಿಕತೆ ಮೆರೆದ ಯಾವನೇ ಒಬ್ಬ ಅಧಿಕಾರಿಯ ವಿಷಯ ದೈನಿಕದ ಪುಟದ ಮೂಲೆಯಲ್ಲಿ ಓದಲು ಸಿಗುತ್ತದೆ. ಅದೇ ಕೊಲೆ, ಸುಲಿಗೆ, ದರೋಡೆ, ನಯವಂಚನೆ, ಮೋಸ – ಇವೇ ಮೊದಲಾದ ವದಂತಿಗಳಿಗೆ ಸಂಬಂಧಿಸಿದ ಸುದ್ದಿಗಳು ಕಣ್ಣಿಗೆ ರಾಚುವಂತೆ ದಪ್ಪದಪ್ಪ ಅಕ್ಷರಗಳಲ್ಲಿ ಮುದ್ರಿಸಿ ಪ್ರಕಟಗೊಳಿಸುವುದನ್ನು ನೋಡುತ್ತೇವೆ. ಯಾವನಾದರೊಬ್ಬ ನಿಸ್ಪೃಹ ವ್ಯಕ್ತಿ ಪ್ರಾಮಾಣಿಕನಾಗಿ ಸನ್ನಡತೆಯಿಂದ ದುಡಿಯುತ್ತ ಸಭ್ಯತೆಯಿಂದ ಬದುಕು ನಡೆಸುತ್ತಿದ್ದರೆ ಅವನಿಗೆ ಚಿಕ್ಕಾಸಿನ ಬೆಲೆಯೂ ಇಲ್ಲ. ಅವನ ಮೇಲೆ ಅಪವಾದ ಹೊರಿಸಲು ಹೊಂಚು ಹಾಕುವುದಕ್ಕೂ ಹಿಂಜರಿಯುವುದಿಲ್ಲ.

ಅದೊಂದು ಕಾಲವಿತ್ತು, ಪ್ರಾಮಾಣಿಕತೆಯನ್ನು ಸನ್ನಡೆಯನ್ನು ಕಳೆದುಕೊಂಡರೆ ಅಪಕೀರ್ತಿ ಬರುತ್ತದೆ, ಹೆಸರಿಗೆ ಕಳಂಕ ತಟ್ಟುತ್ತದೆ, ಮಾನ ಹರಾಜಾಗುತ್ತದೆ ಎಂಬ ಭಾವನೆಯಿತ್ತು. ಆದರೆ ಇಂದು ಪ್ರಾಮಾಣಿಕತೆಯ ಸ್ಥಾನವನ್ನು ಅಪ್ರಮಾಣಿಕತೆ ಆಕ್ರಮಿಸಿಕೊಂಡಿದೆ. ಯಾರು ಎಷ್ಟೆಷ್ಟು ಪ್ರಾಮಾಣಿಕತನದಿಂದ ಮೆರೆಯುತ್ತಾನೋ ಅವರು ಅಷ್ಟೇ ಗೌರವಕ್ಕೆ ಪಾತ್ರರಾಗಿ ದೇವಮಾನವರಂತೆ ಮೆರೆಯುತ್ತಾರೆ.

ಗುಣದಿಂದಲೇ ಮಾನವನು ಶ್ರೇಷ್ಠನೆನಿಸಿಕೊಳ್ಳುತ್ತಾನೆ. ಮೇಲೆ ಎತ್ತರದಲ್ಲಿ ಕುಳಿತೊಡನೆ ಅವನು ಶ್ರೇಷ್ಠನೆಂದೆನಿಸಿಕೊಳ್ಳುವುದಿಲ್ಲ. ದೇವಸ್ಥಾನದ ಶಿಖರ ಮೇಲೆ ಕುಳಿತೊಡನೆ ಕಾಗೆಯನ್ನು ಗರುಡ ಎನ್ನಲಾದೀತೆ? ಆದ್ದರಿಂದ ಉನ್ನತಿ ಎಂಬುದು ಗುಣದಿಂದಲೇ ಹೊರತು ಸ್ಥಾನದಿಂದಲ್ಲ.

ಪ್ರಾಮಾಣಿಕತೆಗೆ ಇಂತಹ ದುರ್ಗತಿ ಬರಲು ಕಾರಣ, ತಾನು ಮೆರೆಯಬೇಕು ಎಂಬ ಮಾನವನ ಅಹಂಭಾವವೇ





ಆಗಿದೆ. ಇದು ಲೋಭವಾಗಿ ಪರಿವರ್ತಿಸುತ್ತದೆ. ಇದರಿಂದ ಸ್ವಾರ್ಥವು ಆತನನ್ನು ಬಂಧಿಸುತ್ತದೆ. ಧನದಾಹ, ಅಧಿಕಾರ, ಹಕ್ಕು ಎಲ್ಲವೂ ತನಗೇ ಬೇಕು, ನನ್ನದೇ ಆಗಬೇಕು, ನಾನೇ ಅನುಭವಿಸಬೇಕು ಎಂಬ ದುರಾಶೆಯಿಂದಲೇ ಸತ್ಯ, ನ್ಯಾಯ, ಧರ್ಮ, ಪ್ರಾಮಾಣಿಕತೆ ಎಲ್ಲಕ್ಕೂ ಎಳ್ಳುನೀರು ಬಿಟ್ಟು ತಾನು ಇಚ್ಛಿಸಿದನ್ನೂ ಗಳಿಸಲು ಮುನ್ನುಗ್ಗುತ್ತಾನೆ.

ಪಾಪಕೃತ್ಯ ಮಾಡಿದವನು ಮಾಡಿದುದರ ಫಲವನ್ನು ಆತನೇ ತಿನ್ನುತ್ತಾನೆ ಎಂದಿದ್ದರೂ, ಅದು ಅವನೊಬ್ಬನೇ ಅಲ್ಲ, ಅವನೊಡನೆ ಸಮಾಜವೂ ರಾಷ್ಟ್ರವು ಅನುಭೋಗಿಸಬೇಕಾಗುತ್ತದೆ. ಒಬ್ಬನು ದುರ್ಬಲನಾದರೆ, ಸಮಾಜಕ್ಕೆ ಅವನ ಕಡೆಯಿಂದ ಬರಬೇಕಾದ ಬಲದ ಪ್ರಮಾಣ ಕಡಿಮೆಯಾಗಿ, ಆತನೇ ಸಮಾಜದಿಂದ ಕಂಟಕಪ್ರಾಯನಾಗುತ್ತಾನೆ.

ಇಂದು ಪ್ರಾಮಾಣಿಕತೆಯಿಂದ ಬದುಕುವುದೇ ಕಷ್ಟವಾಗಿದೆ ಎಂದು ಆತಂಕಪಡಬೇಕಾಗಿಲ್ಲ. 'ಸತ್ಯವಂತರಿಗಿದು ಕಾಲವಲ್ಲ' ಎಂದು ಪುರಂದರದಾಸರು ಹಾಡಿದ್ದರೂ, ಅವರು ಹಾಡಿದ ನಂತರವೂ ಸತ್ಯವಂತರೂ, ಪ್ರಾಮಾಣಿಕರೂ ಬೇಕಾದಷ್ಟು ಮಂದಿ ಆಗಿ ಹೋಗಿದ್ದಾರೆ. ಇಂದೂ ಬದುಕಿ ಇದ್ದಾರೆ. ಅಂದ ಮೇಲೆ ಪ್ರಾಮಾಣಿಕತೆಗೆ, ಸತ್ಯಕ್ಕೆ ನ್ಯಾಯಕ್ಕೆ ಬೆಲೆ ಇಲ್ಲ, ಪ್ರಾಮಾಣಿಕತೆಯಿಂದ ನಡೆದರೆ ಉಳಿಗಾಲ ಇಲ್ಲ ಎಂಬ ಭಾವನೆಯನ್ನು ಬಿಡಬೇಕು. 'ಸತ್ಯಮೇವ ಜಯತೇ' ಎಂಬ ಮಾತಿನಂತೆ ಜಯ ಸತ್ಯಕ್ಕೆ, ಪ್ರಾಮಾಣಿಕತೆಗೆ ಹೊರತು ಅಸತ್ಯಕ್ಕೆ ಅಪ್ರಾಮಾಣಿಕತೆಗೆ ಅಲ್ಲ. ಇದನ್ನು ಮನಗಂಡು ಅಪ್ರಾಣಿಕರನ್ನು ದೂರವಿಡಬೇಕು. ಮಾನವರಾಗಿ ಹುಟ್ಟಿದ ಮೇಲೆ ಮಾನವರಾಗಿ ಬದುಕಬೇಕು, ಮಾನವಂತರಾಗಬೇಕು. ಹಾಗೆ ಬದುಕಿದರೆ ಜೀವನ ಸಾರ್ಥಕವಾಗುತ್ತದೆ. ಅಧರ್ಮ, ಅಪ್ರಮಾಣಿಕತೆ, ಮೋಸ, ವಂಚನೆ ಇವೆಲ್ಲವೂ ತಾತ್ಕಾಲಿಕವಾದುದು. ನೀರಿನ ಮೇಲಿನ ಗುಳ್ಳೆಯಷ್ಟೇ ಕ್ಷಣಿಕ, ಅಶಾಶ್ವತ.

ಸಮಾಜದಲ್ಲಿ ಸುಖ, ಶಾಂತಿ ನೆಮ್ಮದಿ ದೊರಕಲು ಬಸವಣ್ಣನವರ ಸಪ್ತಸೂತ್ರಗಳನ್ನು ಜೀವನದಲ್ಲಿ ಅಳವಡಿಸಿಕೊಂಡು ನಡೆದಾಗ ಮಾತ್ರ ಬದುಕು ಬಂಗಾರವಾಗುತ್ತದೆ.

❄

## ಜಂಗಮಜ್ಯೋತಿ

'ವೀರಾಪುರದ ಕುವರ
ಶಿವನ ಕುಮಾರ
ಶಿವಕುಮಾರ ಮಹಾಸ್ವಾಮಿ'

'ಶತಾಯುಷಿ ಶತಾವದಾನಿಯಾದರೂ
ವಿನಿತ ವಿಶಾರದಾ !
ಜಂಗಮ ಜ್ಯೋತಿ
ನಾಡಿನ ಕಣ್ಮಣಿಯ, ಕರುಣೆಯ
ಕಣ್ಣು, ಕವಳಿಯ ಹಣ್ಣು
ಮುಖ, ಮಂದಾರ ಸ್ಮಿತ
ಬೆನ್ನು, ಫಲಭರಿತ ಕದಳಿ
ನಿಲವು, ಭಾನೆತ್ತರ
ಬಣ್ಣ, ತೇಜೋಪುಂಜ
ಉರಿ, ಉಂಡ ಕರ್ಪೂರ ತೆರದಿ
ಕ್ಷಣ ಕ್ಷಣವೂ ಪಾರದರ್ಶಕ ಸೇವೆಯಲಿ
ಶಿವಯೋಗದ ಸಿದ್ಧಯೋಗಿ
ಶ್ರೀ ಶಿವಕುಮಾರ ಸ್ವಾಮಿ'

'ಶಿವಪ್ರಭಾ ಸ್ವರೂಪ
ಕವಿ ಪ್ರತಾಪ
ಶಿವಪೂಜಾ ಪ್ರದೀಪ
ಒಳಹೊರಗೊಂದಾದ
ಅಭಿನವ ಬಸವ !
ಪವಾಡ ಸ್ಪರ್ಷದಿ
ನಡೆದುದೇ ದಾರಿ
ಸಹಸ್ರಾರು ಅರ್ಥಿಗಳಿಗೆ
ತ್ರಿವಿಧ ದಾಸೋಹಿ
ಬಸವಾದಿ ಪ್ರಮಥರ ಸಿದ್ಧಿಕ್ಷೇತ್ರದ
ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿ'

ಎಂ.ಪಿ. ನೆಗಳೂರ
ನೆಲಮಂಗಲ

# ಉತ್ತಮ ಬಿತ್ತನೆ ಬೀಜ ಮತ್ತು ಪ್ರಾಮುಖ್ಯತೆ

– ಎಸ್. ರಂಗಯ್ಯ
ಸಹಪ್ರಾಧ್ಯಾಪಕರು,
ಪ್ರಾದೇಶಿಕ ಸಂಶೋಧನಾ ಕೇಂದ್ರ, ಬ್ರಹ್ಮಾವರ

ಬಹಳ ಕಾಲದಿಂದಲೂ ಬೀಜದ ಮಹತ್ವದ ವಿಷಯ ಎಲ್ಲರಿಗೂ ತಿಳಿದಿರುವುದೇ. ಉತ್ತಮ ಬೀಜ ಸಮೃದ್ಧ ಬೆಳೆಗೆ ಆಧಾರ. ರೈತರು ಉಪಯೋಗಿಸುವ ಬೀಜದ ಗುಣಮಟ್ಟವು ಇಳುವರಿಯ ಮೇಲೆ ನಿರ್ದಿಷ್ಟವಾದ ಪ್ರಭಾವ ಹೊಂದಿರುತ್ತದೆ. ಒಳ್ಳೆಯ ಗುಣಮಟ್ಟದ ಬೀಜದ ಬಳಕೆಯಿಂದ ಎಕರೆವಾರು ಹೆಚ್ಚು ಇಳುವರಿ ಕೊಟ್ಟು ರೈತರ ಆರ್ಥಿಕ ಮಟ್ಟವನ್ನು ಸುಧಾರಿಸುತ್ತದೆ. ಗುಣಮಟ್ಟ ವಿಲ್ಲದ ಬೀಜ ರೈತರ ಆಸೆ ಆಕಾಂಕ್ಷೆಗಳನ್ನು ನುಚ್ಚುನೂರು ಮಾಡು ತ್ತದೆ. ಕೃಷಿ ಸಾಮಗ್ರಿಗಳಲ್ಲಿ ಇದು ಅತಿ ಮುಖ್ಯವಾದುದು ಮತ್ತು ಬೇರೆ ಸಾಮಗ್ರಿಗಳಿಗೆ ಹೋಲಿಸಿದರೆ ಇದಕ್ಕೆ ತಗಲುವ ವೆಚ್ಚವೂ ಕಡಿಮೆ.

ಇಂದಿನ ಆರ್ಥಿಕ ಪೈಪೋಟಿಯಲ್ಲಿ ಕೃಷಿ ಮಾಧ್ಯಮವೂ ಕೂಡ ಹೆಚ್ಚಿನ ವಾಣಿಜ್ಯ ಭಾವನೆಯನ್ನು ಬೆಳೆಸಿಕೊಳ್ಳುತ್ತಿರುವುದು ಸಹಜವೇ. ಉದಾಹರಣೆಗೆ ಮಾರುಕಟ್ಟೆಯಲ್ಲಿ ಅಕ್ಕಿಯ ಧಾರಣೆಯು ಅದರ ಗುಣಮಟ್ಟದ ಆಧಾರದ ಮೇಲೆ ನಿರ್ಧಾರವಾಗುತ್ತದೆ. ಅತಿ ಹೆಚ್ಚು ಗುಣಮಟ್ಟ ಹೊಂದಿರುವ ಸುವಾಸನಾಭರಿತ ಬಾಸುಮತಿಗೆ ಪ್ರತಿ ಕೆ.ಜಿ.ಗೆ ರೂ. ೩೦ ರಿಂದ ೫೦ರವರೆಗೆ ಹಾಗೂ ಇತರ ಅಕ್ಕಿಗಳಿಗೆ ಗುಣಮಟ್ಟಕ್ಕೆ ತಕ್ಕಂತೆ ರೂ. ೮ ರಿಂದ ೧೬ರವರೆಗೆ ಧಾರಣೆ ಇರುವುದನ್ನು ಗಮನಿಸಿದ್ದೇವೆ. ಅಕ್ಕಿಯನ್ನು ಖರೀದಿಸುವಾಗ ಸಾಮಾನ್ಯವಾಗಿ ಗಮನಿಸುವ ಅಂಶಗಳಲ್ಲಿ ಅಕ್ಕಿಯ ಕಾಳಿನ ಗಾತ್ರ, ಉದ್ದ, ಹೊಳಪುಗಳೇ ಅಲ್ಲದೆ ಅಕ್ಕಿಯಲ್ಲಿನ ನುಚ್ಚು ಮತ್ತು ವಾತಾಂಶ ಇವು ಮುಖ್ಯವಾದವು.

ನಮ್ಮಲ್ಲಿ ತಳಿ ಸಂಶೋಧನೆ ಮತ್ತು ಬಿಡುಗಡೆಯ ಆಧಾರದ ಮೇಲೆ ನಾಲ್ಕು ಪ್ರಕಾರಗಳೆಂದು ವಿಭಜಿಸಿ ಬೀಜವನ್ನು ಉತ್ಪಾದಿಸ ಲಾಗುತ್ತಿದೆ.

೧. **ತಾಯಿ ಬೀಜ** : ಇದು ಸಂಶೋಧನಾ ಕೇಂದ್ರಗಳಲ್ಲಿ ತಳಿತಜ್ಞರಿಂದ ಉತ್ಪಾದಿಸಲ್ಪಟ್ಟು ಅತ್ಯಂತ ಶುದ್ಧವಾಗಿರುತ್ತದೆ. ಕೃಷಿ ವಿಶ್ವವಿದ್ಯಾಲಯಗಳು, ಸಾರ್ವಜನಿಕ ಮತ್ತು ಖಾಸಗಿ ಕಂಪನಿಗಳ ಬೇಡಿಕೆಗಳ ಅನ್ವಯ ತಾಯಿ ಬೀಜವನ್ನು ಉತ್ಪಾದಿಸಿ ಸಾರ್ವಜನಿಕರು ಬೀಜೋತ್ಪಾದಕರ ಸಂಸ್ಥೆಗಳು ಮತ್ತು ಖಾಸಗಿ ಕಂಪನಿಗಳ ಬೇಡಿಕೆಗೆ ಅನುಗುಣವಾಗಿ ವಿತರಿಸುತ್ತಾರೆ.

೨. **ಮೂಲಬೀಜ** : ಇದನ್ನು ತಾಯಿ ಬೀಜದಿಂದ ಬೆಳೆಸಿ ಮೂಲ ಬೀಜವನ್ನು ಉತ್ಪಾದಿಸಲಾಗುತ್ತದೆ. ಮೂಲ ಬೀಜವನ್ನು ಸಾರ್ವಜನಿಕ ಬೀಜೋತ್ಪಾದನೆ ಸಂಸ್ಥೆಗಳು ಅಂದರೆ, ಕರ್ನಾಟಕ ರಾಜ್ಯ ಬೀಜ ನಿಗಮ, ರಾಷ್ಟ್ರೀಯ ಬೀಜ ನಿಗಮ, ಕರ್ನಾಟಕ ಎಣ್ಣೆಕಾಳು ನಿಗಮ ಮತ್ತು ಇತರ ಖಾಸಗಿ ಸಂಸ್ಥೆಗಳು ತಮ್ಮ ಸ್ವಂತ ಸಂಶೋಧನಾ ಕೇಂದ್ರಗಳಲ್ಲಿ ಶೇಕಡಾ ೯೯ರಷ್ಟು ತಳಿ ಶುದ್ಧತೆ ಯೊಂದಿಗೆ ಹೆಚ್ಚಿನ ಪ್ರಮಾಣದಲ್ಲಿ ಉತ್ಪಾದಿಸುವರು.

೩. **ಪ್ರಮಾಣೀಕೃತ ಬೀಜ** : ಪ್ರಮಾಣೀಕೃತ ಬೀಜವನ್ನು ಬೀಜೋತ್ಪಾದಕರು, ನೊಂದಾಯಿಸಿದ ಬೆಳೆಗಾರರು, ಸಾರ್ವಜನಿಕ ಸಂಸ್ಥೆಗಳು - (ಕೆ.ಎಸ್.ಎಸ್.ಸಿ., ಎನ್.ಎಸ್.ಸಿ., ಕೆ.ಎಸ್.ಎಫ್. ಇತರೆ). ತಾಯಿ ಬೀಜ ಅಥವಾ ಮೂಲ ಬೀಜದಿಂದ ಅಧಿಕ ಪ್ರಮಾಣದಲ್ಲಿ ತಮ್ಮ ಹೊಲಗಳಲ್ಲಿ ಅಥವಾ ಬೇರೆ ರೈತರ ಹೊಲಗಳಲ್ಲಿ ಪ್ರಾಸಂಗಿಕ ಕರಾರಿನ ಮೇಲೆ ಕನಿಷ್ಠ ಶೇ. ೯೮ರಷ್ಟು ತಳಿ ಶುದ್ಧತೆಯೊಂದಿಗೆ ಉತ್ಪಾದಿಸುವರು.

೪. **ನಿಜ ಬೀಜ** : ಇದನ್ನು ಸಂಘ ಸಂಸ್ಥೆಯವರು, ಖಾಸಗಿ ಯವರು ಸಹ ಬೀಜ ಪ್ರಮಾಣಕ್ಕೆ ಒಳಪಡಿಸಿದರೆ ಉತ್ಪಾದಿಸ ಬಹುದು. ಈ ಬೀಜವು ಪ್ರಮಾಣಿತ ಬೀಜದ ಎಲ್ಲಾ ಅರ್ಹತೆಗಳನ್ನು ಹೊಂದಿರಬೇಕು. ನಮ್ಮ ರಾಜ್ಯದಲ್ಲಿ ಬೆಳೆಯುವ ಎಲ್ಲ ಬೆಳೆಗಳಲ್ಲಿ ಈ ಬೀಜೋತ್ಪಾದನೆ ಹಂತಗಳನ್ನು ಅಳವಡಿಸಿಕೊಳ್ಳಬಹುದು.

### *ರೈತರು ಎಚ್ಚರ ವಹಿಸಬೇಕಾಗಿರುವ ಕ್ರಮಗಳು :*

ರೈತರು ಉಪಯೋಗಿಸುವ ಯಾವುದೇ ಹಂತದ ಬೀಜ ವಾಗಲಿ ತಾಯಿ ಬೀಜ, ಮೂಲ ಬೀಜ, ಪ್ರಮಾಣಿತ ಬೀಜವಾಗಲಿ ಅಥವಾ ಖಾಸಗಿ ತಳಿಗಳಾಗಲಿ ಅಂಗೀಕೃತವಾದ ಮೂಲದಿಂದ ಪಡೆದಿರಬೇಕು ಮತ್ತು ಕೆಲವು ದಾಖಲಾತಿಗಳನ್ನು ನೋಡಬೇಕು. ಅಂದರೆ ಬೀಜರಾಶಿಗಳ ಚೀಲಗಳ ಮೇಲೆ ಯಾವುದೇ ಸಂಸ್ಥೆಯಿಂದ ತೆಗೆದುಕೊಳ್ಳಲಿ ಮುದ್ರಿತ ಚೀಟಿಗಳ ಬಣ್ಣ ಮತ್ತು ದಾಖಲಾತಿಗಳನ್ನು ಪರಿಶೀಲನೆ ಮಾಡಬೇಕು. ತಾಯಿ ಬೀಜವಾದಲ್ಲಿ ಹಳದಿ ಬಣ್ಣ ಹೊಂದಿರುತ್ತದೆ. ಮೂಲ ಬೀಜವಾದಲ್ಲಿ ಬಿಳಿ, ಪ್ರಮಾಣಿತ ಬೀಜವಾದಲ್ಲಿ ಮುದ್ರಿತ ನೀಲಿ ಚೀಟಿ ಇರುತ್ತದೆ. ಸಂಸ್ಥೆಯು ನಿಗದಿಪಡಿಸಿರುವ ಚೀಟಿಗಳ ಮೇಲೆ ಸಂಸ್ಥೆಯ ಸಂಕೇತ ಹಾಗೂ ಇತರ ವಿವರಗಳಾದ ಬೆಳೆಯ ತಳಿ ಹೆಸರು, ಬೀಜರಾಶಿಯ ಸಂಖ್ಯೆ ಪ್ರಮಾಣಿತ ಪತ್ರದ ಸಂಖ್ಯೆ, ಬೀಜ ಪರೀಕ್ಷಿಸಲಾದ ದಿನಾಂಕ,





ಪ್ರಮಾಣೀಕರಿಸಿದ ದಿನಾಂಕ, ಬೀಜ ವಿತರಿಸಿದ ದಿನಾಂಕ, ಬೀಜ ರಾಶಿಯ ಅಂತಿಮ ಅವಧಿಯ ದಿನಾಂಕ ಮತ್ತು ಬೀಜೋತ್ಪಾದಕರ ಹೆಸರು ಹಾಗೂ ವಿಳಾಸವನ್ನು ನಮೂದಿಸಲಾಗುವುದು. ಮೇಲಿನ ವಿವರಗಳನ್ನು ಪರಿಶೀಲಿಸಿ ರೈತರು ಬೀಜವನ್ನು ಪಡೆಯಬೇಕು.

### *ಬೀಜ ಪರೀಕ್ಷೆ ಏಕೆ ಬೇಕು ಮತ್ತು ಉತ್ತಮ ಬೀಜಕ್ಕೆ ಇರಬೇಕಾದಂತಹ ಗುಣಗಳು*

ಬೆಳೆಯುವ ಸಿರಿ ಮೊಳಕೆಯಲ್ಲಿಯೇ ನೋಡು ಎನ್ನುವಂತೆ ಮುಂಬರುವ ಬೆಳೆಯ ಗುಣಮಟ್ಟ ಸಾಂದ್ರತೆಯನ್ನು ಕಾಪಾಡಲು ಬೀಜ ಪರೀಕ್ಷೆ ಅತಿ ಅವಶ್ಯಕ.

ತಳಿ ಯಾವುದೇ ವರ್ಗಕ್ಕೆ ಸೇರಿರಲಿ ಉತ್ಪಾದನೆಗೆ ಉಪಯೋಗಿಸುವಂತಹ ಬೀಜವು ಕೆಲವು ಗುಣಧರ್ಮಗಳನ್ನು ಹೊಂದಿರಬೇಕು. ಅವುಗಳಲ್ಲಿ ಮುಖ್ಯವಾದವು ಕೆಳಗಿನಂತಿವೆ.

೧. **ತಳಿಯು ಅನುವಂಶಿಕವಾಗಿ ಶುದ್ಧವಾದ ಬೀಜ** : ಯಾವುದೇ ಹಂತದ ಬೀಜವಾಗಲಿ ಈ ಗುಣ ತೃಪ್ತಿಕರವಾಗಿದೆಯೇ ಎಂದು ತಿಳಿಯುವುದು ಅಗತ್ಯ.

ಉದಾ : ತಾಯಿ ಬೀಜವಾದಲ್ಲಿ ಶೇ. ೧೦೦ರಷ್ಟು, ಮೂಲ ಬೀಜವಾದಲ್ಲಿ ಶೇ. ೯೯ರಷ್ಟು ಪ್ರಮಾಣೀಕೃತವಾದಲ್ಲಿ ಶೇ. ೯೮ರಷ್ಟು ಹಾಗೂ ಹೈಬ್ರೀಡ್ ಬೀಜವಾದಲ್ಲಿ ಶೇ. ೯೫ರಷ್ಟು ಪರಿಶುದ್ಧವಾಗಿರ ಬೇಕು.

೨. **ಭೌತಿಕ ಪರಿಶುದ್ಧತೆ** : ಧಾನ್ಯ ಬೆಳೆ, ತರಕಾರಿ ಬೆಳೆ ಹಾಗೂ ಇತರ ತೋಟಗಾರಿಕಾ ಬೆಳೆಗಳಲ್ಲಿ ಬೀಜದ ಭೌತಿಕ ಪರಿಶುದ್ಧತೆಯು ಶೇಕಡಾ ೯೮ರಷ್ಟು ಇರಬೇಕು.

೩. **ಬೀಜದ ಆರೋಗ್ಯ ಶುದ್ಧತೆ** : ರೋಗ ಮತ್ತು ಕೀಟದ ಬಾಧೆಯಿಂದ ಮುಕ್ತವಾದ ಆರೋಗ್ಯಕರ ಬೀಜವಾಗಿರಬೇಕು.

೪. **ಬೀಜದ ಜೀವಸತ್ವ ಮತ್ತು ಬಲ** : ಬಲಿಷ್ಠವಾದ ಹಾಗೂ ದೃಢವಾದ ಮೊಳಕೆಯಿಂದ ಇದನ್ನು ಕಂಡುಕೊಳ್ಳಬಹುದು.

೫. **ಬೀಜದ ಮೊಳೆಯುವಿಕೆಯು ಸಾಮರ್ಥ್ಯ** : ಧಾನ್ಯ ಬೆಳೆಯಾದಲ್ಲಿ ಶೇ. ೮೦ ಭತ್ತ, ಮುಸುಕಿನ ಜೋಳ, ರಾಗಿ, ತರಕಾರಿ ಬೆಳೆಯಲ್ಲಿ ಶೇ. ೬೦-೭೫ರಷ್ಟು ಮೊಳೆಯುವಿಕೆ ಇರಬೇಕು.

೬. **ಬೀಜದ ತೇವಾಂಶ** : ಭತ್ತದಲ್ಲಿ ಶೇಕಡಾ ೧೩ ತೇವಾಂಶವನ್ನು ಬಹಳ ಕನಿಷ್ಠ ಮಟ್ಟಕ್ಕೆ ತರಬೇಕು. ಬೀಜಗಳನ್ನು ಚೆನ್ನಾಗಿ ಒಣಗಿಸಿದ ನಂತರ ಮತ್ತೆ ನೀರನ್ನು ಹೀರಿಕೊಳ್ಳದ ಹಾಗೆ ನೋಡಿಕೊಳ್ಳಬೇಕು. ಅದಕ್ಕೆ ಈ ಭಾಗದಲ್ಲಿ ಬತ್ತದ ಬೀಜ ಗಳನ್ನು ಶೇಖರಿಸುವಲ್ಲಿ ಮುಡಿಕಟ್ಟುವುದು ರೂಢಿಯಲ್ಲಿದೆ. ಇದಲ್ಲದೆ ಪ್ಲಾಸ್ಟಿಕ್ ಚೀಲ, ಡಬ್ಬಗಳು ಮುಂತಾದವುಗಳಲ್ಲಿ ಶೇಖರಣೆ ಮಾಡಿ ಇಡಬೇಕಾಗುತ್ತದೆ.

### *ಬಿತ್ತನೆ ಬೀಜದ ಮೊಳೆಯುವಿಕೆಯ ಸಾಮರ್ಥ್ಯ ಕಂಡು ಹಿಡಿಯುವ ವಿಧಾನ*

ಮೊಳೆಯುವ ಹಾಳೆಯನ್ನು ಪರೀಕ್ಷಿಸುವುದು, ದೊಡ್ಡ ಬೀಜವಾದಲ್ಲಿ ೫೦ ಬೀಜ ಅಥವಾ ಚಿಕ್ಕ ಬೀಜವಾದಲ್ಲಿ ೧೦೦ ಬೀಜಗಳನ್ನು ತೆಗೆದುಕೊಳ್ಳಬೇಕು. ನೆನೆಸಿದ ಎರಡು ಮೊಳೆಯಿಂದ ಹಾಳೆಗಳ ಮಧ್ಯದಲ್ಲಿ ಹಾಕಿ ಸುತ್ತಿ ನಿಗದಿಪಡಿಸಿದ ಉಷ್ಣಾಂಶ ಮತ್ತು ತೇವಾಂಶದಲ್ಲಿ ನಿಗದಿಪಡಿಸಿದ ಅವಧಿಯವರೆಗೆ (೫ ರಿಂದ ೧೦ ದಿನ) ಇಡುವುದರಿಂದ ಅದರ ಮೊಳಯುವಿಕೆಯ ಸಾಮರ್ಥ್ಯವನ್ನು ಕಂಡುಹಿಡಿಯಬಹುದು. ಇನ್ನು ಬೇರೆ ವಿಧಾನಗಳಾದ ಪ್ಲಾಸ್ಟಿಕ್ ತಡೆಯಲ್ಲಿ ಅಥವಾ ಮರಳಿನಲ್ಲಿ ಹಾಕಿ ಬೀಜದ ಮೊಳೆಯುವಿಕೆಯನ್ನು ಪರೀಕ್ಷಿಸಬಹುದು.

### *ಮೊಳೆಯುವಿಕೆಯನ್ನು ಲೆಕ್ಕಹಾಕುವ ರೀತಿ*

ಉತ್ತಮ ಮೊಳಕೆಗಳು, ವಿಕೃತ ಮೊಳಕೆಗಳು, ಗಟ್ಟಿ ಬೀಜಗಳು, ಮೊಳಕೆಯೊಡೆಯದ ಬೀಜಗಳು ಮತ್ತು ಕೊಳೆತ ಅಥವಾ ಸತ್ತ ಬೀಜಗಳು ಎಂದು ಪರೀಕ್ಷಿಸಿದ ನಂತರ ಈ ತರಹ ವಿಂಗಡಿಸಬೇಕು. ಉತ್ತಮ ಮೊಳಕೆಯ ಸಂಖ್ಯೆಯ ಮೇಲೆ ಬಿತ್ತನೆ ಬೀಜ ಮಾದರಿಯ ಮೊಳೆಯುವ ಶಕ್ತಿಯನ್ನು ಶೇಕಡಾವಾರು ನಿರ್ಧರಿಸಲಾಗುವುದು.

ಉದಾ : ಬೇರೆ ಹಾಗೂ ಇನ್ನೂ ಕೆಲವು ಗಟ್ಟಿ ಬೀಜದ ಬೆಳೆಗಳಲ್ಲಿ, ಗಟ್ಟಿ ಬೀಜಗಳ ಸಂಖ್ಯೆಯನ್ನು ಉತ್ತಮ ಬೀಜಗಳೆಂದೇ ಪರಿಗಣಿಸಬೇಕು. ಹೆಚ್ಚಿನ ಎಲ್ಲಾ ತೋಟಗಾರಿಕಾ ಬೆಳೆಯಲ್ಲಿ ಕನಿಷ್ಠ ಬೀಜ ಮೊಳೆಯುವಿಕೆಯು ಶೇ. ೬೦ರಷ್ಟು ಇರಬೇಕು. ಉದಾ. ಗೇರು ಬೀಜಗಳು ಉದ್ದವಾಗಿದ್ದು ತೂಕದಿಂದ ಕೂಡಿರಬೇಕು. ಇದನ್ನು ನಿರ್ಧರಿಸುವುದು ಬಹಳ ಸುಲಭ. ಗೇರು ಬೀಜಗಳನ್ನು ನೀರಿನಲ್ಲಿ ಹಾಕಬೇಕು. ಮುಳುಗಿದಂತಹ ಬೀಜಗಳನ್ನು ಆಯ್ಕೆಮಾಡಿ ಬಿತ್ತುವುದು ಸೂಕ್ತ. ಏಕೆಂದರೆ ಅವು ತೂಕದಿಂದ ಕೂಡಿದ್ದು ಉತ್ತಮ ಗುಣಮಟ್ಟ ಹೊಂದಿರುತ್ತವೆ. ಈ ಬೀಜಗಳು ಮೊಳಕೆಯೊಡೆದಾಗ ದೃಢವಾದ ಸಸಿಗಳು ದೊರೆಯುತ್ತವೆ. ಕಸಿ ಕಟ್ಟುವುದಕ್ಕೂ ಸಹ ಉನ್ನತ ಗುಣಮಟ್ಟವನ್ನು ಹೊಂದಿರುತ್ತವೆ.

ಕೆಲವು ಬೆಳೆಗಳಲ್ಲಿ ಬೀಜಗಳ ಸಂಖ್ಯಾಭಿವೃದ್ಧಿ ಪ್ರಮಾಣ ಬಹಳ ಕಡಿಮೆ. ಇನ್ನು ಕೆಲವು ಬೆಳೆಗಳಲ್ಲಿ ಬೀಜಗಳ ಸಂಖ್ಯಾಭಿವೃದ್ಧಿ ಬಹಳೆ ಹೆಚ್ಚಾಗಿರುತ್ತದೆ. ತರಕಾರಿ ಬೆಳೆಗಳಲ್ಲಿ ಮೊಳಕೆ ಪ್ರಮಾಣ ಸಾಮಾನ್ಯವಾಗಿ ಬಹಳ ಕಡಿಮೆ ಇರುತ್ತದೆ. ಅಲ್ಲದೆ ಮೊಳಕೆ ಶಕ್ತಿಯನ್ನು ಬೇಗ ಕಳೆದುಕೊಳ್ಳುತ್ತದೆ.

### ದಿಢೀರ್ ತೇವಾಂಶ ಪರೀಕ್ಷೆ

ಮೊಳೆಯುವಿಕೆಯ ಶಕ್ತಿಯನ್ನು ಕೆಲವು ಗಂಟೆಗಳಲ್ಲಿ ಈ ವಿಧಾನದಿಂದ ಕಂಡುಹಿಡಿಯಬಹುದು. ಟೆಟ್ರಾಜೋಲಿಯಂ ಶೇ. ೦.೫ ದ್ರಾವಣದಲ್ಲಿ ಮೊದಲೇ ನೆನೆಸಿದ ಬೀಜಗಳನ್ನು ಸುಮಾರು ೧-೪ ಗಂಟೆಯವರೆಗೆ ಕತ್ತಲಲ್ಲಿ ನೆನೆಸಬೇಕು. ಅನಂತರ ಜೀವಂತ ಬೀಜಗಳ ಭ್ರೂಣಗಳು ಕೆಂಪು ಬಣ್ಣಕ್ಕೆ ತಿರುಗುವುದನ್ನು ಕಾಣಬಹುದು. ಸತ್ತ ಬೀಜಗಳು ಬಣ್ಣ ಕಳೆದುಕೊಳ್ಳುವುದಿಲ್ಲ. ಕೆಂಪು ಬಣ್ಣ ತೆಗೆದುಕೊಂಡ ಬೀಜಗಳನ್ನು ಶೇಕಡಾವಾರು ಲೆಕ್ಕ ಹಾಕಿ ಮೊಳೆಯುವಿಕೆಯ ಶಕ್ತಿಯನ್ನು ನಿರ್ಧರಿಸಬಹುದು.

### ಉತ್ತಮ ಬೀಜ ಉತ್ಪಾದಿಸುವಲ್ಲಿ ಮುಖ್ಯವಾಗಿ ಅನುಸರಿಸಬೇಕಾದ ಕ್ರಮಗಳು

೧. ಮೊಟ್ಟಮೊದಲು ಆಯಾ ಬೆಳೆಗೆ ತಕ್ಕಂತೆ ಸರಿಯಾದ ಕಾಲದ ಋತುವಿನಲ್ಲಿ ಬೀಜೋತ್ಪಾದನೆಯನ್ನು ಕೈಗೊಳ್ಳಬೇಕು.

ಉದಾ : ಈರುಳ್ಳಿ ಗಜ್ಜರಿ ಮುಂತಾದವುಗಳನ್ನು ತಂಪಾದ ಹವಾಗುಣದಲ್ಲಿ (ಚಳಿಗಾಲ) ಬೆಳೆಯಬೇಕು. ಟೊಮಾಟೊ, ಬದನೆ, ಬೆಂಡೆ, ಮೆಣಸಿನಕಾಯಿ, ಕಲ್ಲಂಗಡಿ ಮತ್ತು ಇತರ ತರಕಾರಿಗಳನ್ನು ಹೆಚ್ಚಿನ ಉಷ್ಣಾಂಶದಲ್ಲಿ ೨೫-೩೦° ಉಷ್ಣಾಂಶವಿರುವ ಬೇಸಿಗೆ ಕಾಲದಲ್ಲಿ ಬೆಳೆಯಬಹುದು.

೨. ಫಲವತ್ತಾದ ಮಣ್ಣು, ಮಣ್ಣು ಮೂಲ ರೋಗಗಳಿಂದ ಮುಕ್ತವಾದ ಹಾಗೂ ಹಿಂದಿನ ಋತುವಿನಲ್ಲಿ ಅದೇ ಬೆಳೆಯನ್ನು ಬೆಳೆಯದ ಭೂಮಿಯಲ್ಲಿ ಸಸಿ ಮಡಿಗಳನ್ನು (ನರ್ಸರಿ) ಮಾಡಬೇಕು ಹಾಗೂ ಬೆಳೆಗಳನ್ನು ಬೆಳೆಯಬೇಕು.

೩. ಬೀಜಗಳ ಮೂಲ ಅಂದರೆ ಸರಿಯಾದ ಶ್ರೇಷ್ಠ ಗುಣಮಟ್ಟದ ಹಾಗೂ ನಿರ್ದಿಷ್ಟವಾದ ಮೂಲದಿಂದ ಬೀಜಗಳನ್ನು ಪಡೆಯಬೇಕು.

೪. ಅಂತರದೂರ ಅಂದರೆ, ಬೇರೆ ಬೇರೆ ಬೆಳೆಗಳಿಂದ ಪ್ರಮಾಣಿತವಾಗದೆ (ಸರ್ಟಿಫೈಡ್ ಆಗದೆ) ಅದೇ ತಳಿಯಿಂದ ಶಿಫಾರಸ್ಸು ಮಾಡಿದ ಅಂತರ ದೂರವನ್ನು ಅನುಸರಿಸುವುದರಿಂದ ಹೆಚ್ಚಿನ ಅನುವಂಶೀಯ ಹಾಗೂ ಭೌತಿಕ ಪರಿಶುದ್ಧತೆಯನ್ನು ಕಾಪಾಡಬಹುದಲ್ಲದೆ ರೋಗ ಹರಡುವಿಕೆಯನ್ನು ತಡೆಯಬಹುದು.

ಉದಾ : ಬತ್ತ ಮತ್ತು ರಾಗಿಯಲ್ಲಿ ೧೫೦ ಮೀ. ಮುಸುಕಿನ ಜೋಳ ೬೦೦ ಮೀ. ಟೊಮಾಟೊ ೫೦ ಮೀ. ಬೀನ್ಸ್ ೧೦೦ ಮೀ. ಬೆಂಡೆ ೫೦೦ ಮೀ. ಮೆಣಸಿನಕಾಯಿ ೫೦೦ ಮೀ. ಸೌತೆಕಾಯಿ ೧೦೦೦ ಮೀ. ಮತ್ತು ಬದನೆ ೧೦೦೦ ಮೀ.

೫. ರೋಗಿಂಗ್ ಅಂದರೆ ಬೀಜಕ್ಕಾಗಿ ಬೆಳೆಯುವಂತಹ ತಾಕುಗಳಲ್ಲಿ ಬೇರೆ ತಳಿ, ಕಳೆ ಹಾಗೂ ರೋಗಗ್ರಸ್ತ ಗಿಡಗಳನ್ನು ಹಾಗೂ ಇತರ ಪರಕೀಯ ಸಸ್ಯಗಳನ್ನು ಹೂಬಿಡುವ ಮೊದಲೇ ಸರಿಯಾದ ಸಮಯದಲ್ಲಿ ಬೇರುಸಹಿತ ಕಿತ್ತು ಹಾಕಬೇಕು. ಇದರಿಂದ ಅನುವಂಶಿಕ ಹಾಗೂ ಭೌತಿಕ ಪರಿಶುದ್ಧತೆಯನ್ನು ಹೆಚ್ಚಿಸಬಹುದು.

೬. ಬೆಳೆಯ ಕಟಾವು, ಒಕ್ಕಣೆ ಸಮಯದಲ್ಲಿ ಬೇರೆ ತಳಿ ಬೀಜಗಳು ಬೆರಕೆಯಾಗದಂತೆ ಎಚ್ಚರವಹಿಸಬೇಕು.

೭. ಬೀಜ ಸಂಸ್ಕರಿಸಿದಾಗ ಶಿಫಾರಸ್ಸು ಮಾಡಿದ ಜರಡಿಯಿಂದ ಬೀಜವನ್ನು ಶುದ್ಧಿ ಮಾಡಬೇಕು.

೮. ಬೀಜ ತುಂಬಿದ ಚೀಲಗಳನ್ನು ನೆಲದ ಮೇಲೆ ಇಡದೆ ಮರದ ಹಲಗೆಗಳ ಮೇಲೆ ಶೇಖರಿಸಬೇಕು.

ಮೇಲೆ ಹೇಳಿದ ರೀತಿಯನ್ನು ಅನುಸರಿಸುವುದರಿಂದ ಉತ್ತಮ ಬಿತ್ತನೆ ಬೀಜ ಪಡೆಯುವಲ್ಲಿ ರೈತರು ಯಶಸ್ವಿಯಾಗಬಹುದು.

### ಬೀಜೋತ್ಪಾದನೆಯ ನ್ಯೂನತೆಗಳು

೧. ಸಕಾಲದಲ್ಲಿ ಅಂಗೀಕೃತ ಮೂಲಗಳಿಂದ ತಾಯಿ ಬೀಜ, ಮೂಲ ಬೀಜಗಳು, ಬಿತ್ತನೆಗೆ ಸಿಗದೆ ಇರುವುದು.

೨. ವೈಜ್ಞಾನಿಕ ರೀತಿಯ ಬಿತ್ತನೆ ಮಾಡದೆ ಇರುವುದು ಹಾಗೂ ಸಕಾಲದಲ್ಲಿ ತಾಂತ್ರಿಕ ಸಲಹೆ ಸಿಗದೆ ಇರುವುದು.

೩. ಉತ್ಪಾದಿಸಿದ ಬೀಜಕ್ಕೆ ಉತ್ತಮ ಬೆಲೆ ಸಿಗದಿರುವುದು ಹಾಗೂ ಸಂಸ್ಕರಣೆ ಹಾಗೂ ಶೇಖರಣೆ ಸೌಲಭ್ಯಗಳ ಕೊರತೆ.

### ಬಿತ್ತನೆ ಬೀಜದ ಪ್ರಾಮುಖ್ಯತೆ

ನಮ್ಮ ದೇಶದಲ್ಲಿ ಕೈಗಾರಿಕೆಗಳು ಹಾಗೂ ನಗರಗಳು ತ್ವರಿತಗತಿಯಲ್ಲಿ ಅಭಿವೃದ್ಧಿಯಾಗುತ್ತಿರುವುದರಿಂದ ಕೃಷಿಗೆ ಯೋಗ್ಯವಾದ ಭೂಮಿ ಕ್ರಮೇಣ ಕಡಿಮೆಯಾಗುತ್ತಿದ್ದು ಆಹಾರಕ್ಕಾಗಿ ಚಾಚುವ ಕೈಗಳ ಸಂಖ್ಯೆ ದಿನೇ ದಿನೇ ಅಧಿಕವಾಗುತ್ತಿದೆ. ಇಂತಹ ಜಟಿಲ ಪರಿಸ್ಥಿತಿಯಲ್ಲಿ, ಇರುವಷ್ಟು ಕೃಷಿ ಭೂಮಿಯಲ್ಲೇ ಉತ್ಪಾದನೆ ಹಾಗೂ ಉತ್ಪಾದಕತೆಯನ್ನು ಹೆಚ್ಚಿಸುವುದು ಅತಿ ಅಗತ್ಯ.

ಬೇಸಾಯಕ್ಕೆ ಬೇಕಾಗುವ ಎಲ್ಲಾ ಅಗತ್ಯಗಳಲ್ಲಿ ಬಿತ್ತನೆ ಬೀಜ ಮಹತ್ತರ ಸ್ಥಾನ ಪಡೆದ ಮೂಲ ಸಾಮಗ್ರಿ. ಬಿತ್ತನೆಯಂತೆ ಬೆಳೆ, ನೂಲಿನಂತೆ ಸೀರೆ ಎಂಬ ಗಾದೆಯಂತೆ ಯಾವುದೇ ಬೆಳೆಯ ಇಳುವರಿಯು ಬಹುಮಟ್ಟಿಗೆ ಅದರ ಬಿತ್ತನೆಯ ಗುಣಮಟ್ಟವನ್ನು ಅವಲಂಬಿಸಿರುತ್ತದೆ. ಇಂತಹ ಗುಣಮಟ್ಟದ ಬೀಜಗಳನ್ನು ಉತ್ಪಾದಿಸಲು ನುರಿತ ಸಿಬ್ಬಂದಿ ಹಾಗೂ ಆಧುನಿಕ ತಂತ್ರಜ್ಞರ ಸಂಯೋಜನೆಯಿಂದ ಮಾತ್ರ ಸಾಧ್ಯ.

*(ಕೃಪೆ : ನಮ್ಮ ಪರಿಸರ)* *







# ರೇ ಕೀ ಚಿಕಿತ್ಸೆ

– ಪ್ರೊ. ಎಸ್. ಸಿದ್ದಪ್ಪ
ಹೋಲಿಸ್ಟಿಕ್ ಹೀಲರ್
499, 10ನೇ ಮುಖ್ಯರಸ್ತೆ, ವಿಜಯನಗರ
ಬೆಂಗಳೂರು – 560 040.

ರೇ ಕೀ ಎಲ್ಲಾ ಕಡೆ ಹರಡಿರುವ 'ಜೀವಶಕ್ತಿ' (ಪ್ರಾಣಶಕ್ತಿ). ಇದು ಎಲ್ಲಾ ಜೀವಿಗಳಿಗೆ ಆಧಾರವಾಗಿದೆ. ಸುಮಾರು ಕ್ರಿ.ಶ. ೧೮೫೦ರಲ್ಲಿ ಜಪಾನಿನ ಡಾ. ಮಿಕಾನ್ ಉಸ್ಯೆ ಈ ತತ್ವವನ್ನು ಆಚರಣೆಗೆ ತಂದರು. ರೇ ಕೀ ಸುಲಭ, ಸಹಜ ಮತ್ತು ಪರಿಪೂರ್ಣವಾದ ಚಿಕಿತ್ಸೆ. ರೇ ಕೀ ಮಾನವನ ಎಲ್ಲಾ ಹಂತದಲ್ಲೂ ಅಂದರೆ ಶಾರೀರಿಕ, ಮಾನಸಿಕ ಮತ್ತು ಆಧ್ಯಾತ್ಮಿಕ ಪ್ರಕೃತಿಯ ಮೂಲಕ ಕೆಲಸ ಮಾಡುತ್ತದೆ.

ನಮ್ಮ ದೇಹವನ್ನು ಎರಡು ಬಗೆಯಾಗಿ ವಿಂಗಡಿಸಬಹುದು. ೧. ಸ್ಥೂಲ ದೇಹ, ೨. ಸೂಕ್ಷ್ಮ ದೇಹ. ಮೊದಲನೆಯದು ಕಣ್ಣಿಗೆ ಕಾಣಿಸುವಂತಹುದು (ಶರೀರ). ಎರಡನೆಯದು ಅಗೋಚರವಾದದ್ದು. ಇದನ್ನು ಸೂಕ್ಷ್ಮ ಪ್ರಾಣ ಎಂದೂ ಕರೆಯುತ್ತಾರೆ. ಇವೆರಡು ನಮ್ಮ ದೇಹದಲ್ಲಿ ಜೀವವಿರುವವರೆಗೂ ಪರಿಣಾಮಕಾರಿಯಾಗಿ ಕೆಲಸ ಮಾಡುತ್ತಲೇ ಇರುತ್ತವೆ. ಈ ಚಿಕಿತ್ಸಾ ಕ್ರಮದ ಪ್ರಕಾರ ಭೌತಿಕ ದೇಹದ ಸುತ್ತಲೂ ಅಂಡಕಾರವಾದ ಏಳು ಸುತ್ತಿನ ಸೂಕ್ಷ್ಮಪ್ರಭೆ, ಏಳು ಬಣ್ಣದೊಂದಿಗೆ (ಆರಾ) ಸುತ್ತುತ್ತಿರುತ್ತದೆ. ಇದೇ ದೇಹದ ಜೀವಾಳ. ಈ ಜೀವಾಳವೇ ನಮ್ಮೆಲ್ಲರ ಗುಣ, ದೇಹಾರೋಗ್ಯದ ಸ್ಥಿತಿ, ಜ್ಞಾನ ಶಕ್ತಿಗಳಿಗೆ ಮೂಲ ಕಾರಣವಾಗಿದೆ.

ನಮ್ಮ ಎಲ್ಲಾ ಶಾರೀರಿಕ ಖಾಯಿಲೆಗಳಿಗೆ ನಮ್ಮ ಮನಸ್ಸೆ ಮುಖ್ಯ ಕಾರಣ. ನಮ್ಮ ಯೋಚನೆ ಮತ್ತು ಕಾರ್ಯಗಳು ಪ್ರಾಣಶಕ್ತಿಯನ್ನು ಬಿಡುಗಡೆ ಮಾಡುತ್ತವೆ. ಋಣ ಸಂಬಂಧವಾದ (ನೆಗೆಟೀವ್) ಆಲೋಚನೆಗಳು ನಮ್ಮೆಲ್ಲ ಶಾರೀರಿಕ ಮತ್ತು ಮಾನಸಿಕ ಖಾಯಿಲೆಗಳಿಗೆ ಕಾರಣವೆಂದು ತಿಳಿದು ಬಂದಿದೆ. ಅದೇ ರೀತಿ ಧನಮುಖ (ಪಾಸಿಟೀವ್) ಸಂಬಂಧವಾದ ಆಲೋಚನೆಗಳು ನಮ್ಮ ಸೌಖ್ಯ, ಆನಂದ ಮತ್ತು ಆರೋಗ್ಯಕ್ಕೆ ಪೂರಕವಾಗಿವೆ ಎಂದು ತಿಳಿದುಬಂದಿದೆ.

ಮೇಲೆ ಹೇಳಿರುವಂತೆ ಮಾನವನ ಶರೀರವು ಜೀವಶಕ್ತಿಯಿಂದ ತುಂಬಿದೆ. ದೇಹದ ಯಾವುದೇ ಅಂಗ ಸರಿಯಾಗಿ ಕೆಲಸ ಮಾಡದಿದ್ದಲ್ಲಿ, ಅಲ್ಲಿ ಜೀವಶಕ್ತಿಯ ಕೊರತೆ ಅಥವಾ ಅಗತ್ಯಕ್ಕಿಂತ ಜಾಸ್ತಿ ಶಕ್ತಿ ಅಲ್ಲಿರುವುದೇ ಕಾರಣ. ಹೀಗಾಗಿ ಜೀವಶಕ್ತಿಯ ಕೊರತೆಯೇ ರೋಗಕ್ಕೆ ಮೂಲ ಕಾರಣ.

ನಮ್ಮ ದೇಹದಲ್ಲಿ ಮುಖ್ಯವಾಗಿ ಏಳು ಚಕ್ರಗಳಿವೆ: ರೇ ಕೀ ಯಲ್ಲಿ ಮೂಲಾಧಾರದಲ್ಲಿರುವ ಶಕ್ತಿಯನ್ನು ಪ್ರಕೃತಿ ಮತ್ತು ಸಹಸ್ರಾರು ಚಕ್ರದಲ್ಲಿರುವ ಶಕ್ತಿಯನ್ನು ಪುರುಷನೆಂದು ತಿಳಿಯಲಾಗಿದೆ. ರೇ ಕೀಯಲ್ಲಿ ಸಹಸ್ರಾರು ಚಕ್ರವನ್ನು ಕ್ರಿಯಾಶೀಲವಾಗಿಸುತ್ತಾರೆ. ಆಗ ಮಿಕ್ಕೆಲ್ಲ ಚಕ್ರಗಳನ್ನು ಪ್ರಾಣಶಕ್ತಿಯಿಂದ ಜಾಗೃತಗೊಳಿಸಿ ಶರೀರದ ಎಲ್ಲಾ ಭಾಗಕ್ಕೂ ಹರಡುವಂತೆ ಮಾಡುತ್ತದೆ.

ರೇ ಕೀ ಚಿಕಿತ್ಸೆಯಿಂದ ದುರ್ಬಲವಾಗಿರುವ ಅಂಗಗಳಿಗೆ ಶಕ್ತಿಯು ಹರಿದು ನವ ಚೈತನ್ಯವನ್ನು ತಂದು ಕಾಯಿಲೆಗಳು ಹೇಳ ಹೆಸರಿಲ್ಲದೆ ಮಾಯವಾಗುತ್ತದೆ. ರೇ ಕೀ ಚಿಕಿತ್ಸೆ ಮಾಡುವವರು ಯಾವ ಕಾಯಿಲೆ ಎಂದು ಕೇಳುವುದಿಲ್ಲ, ಬದಲಿಗೆ ಯಾವ ಭಾಗದಲ್ಲಿ ತೊಂದರೆ ಎಂದು ತಿಳಿದು ಶಕ್ತಿಯನ್ನು ತುಂಬಿ ಕಾಯಿಲೆ ವಾಸಿ ಮಾಡುತ್ತಾರೆ.

ರೇ ಕೀ ಚಿಕಿತ್ಸೆಯನ್ನು ಕಲಿಯುವುದು ಮತ್ತು ಆಚರಣೆಗೆ ತರುವುದು ಬಹು ಸುಲಭ. ಇದಕ್ಕಾಗಿ ಯಾವ ಶಿಕ್ಷಣವೂ ಬೇಕಿಲ್ಲ. ರೇ ಕೀಯಲ್ಲಿ ಐದು ಡಿಗ್ರಿಗಳಿವೆ. ರೇ ಕೀಯ ಮೊದಲನೇ ಡಿಗ್ರಿಯನ್ನು ಕಲಿತ ಮೇಲೆ ಸಾಧಾರಣ ರೋಗಗಳಾದ ತಲೆನೋವು, ಮೈ ಕೈ ನೋವು, ಸಾಧಾರಣ ಜ್ವರ, ಶೀತ ಇವುಗಳನ್ನು ವಾಸಿ ಮಾಡಿಕೊಳ್ಳಬಹುದು ಮತ್ತು ವಾಸಿ ಮಾಡಬಹುದು. ನಿತ್ಯ ಪ್ರಯತ್ನದಿಂದ ರೇ ಕೀ ಯಲ್ಲಿ

ವೃದ್ಧಿ ಉಂಟಾಗಿ, ರಕ್ತದೊತ್ತಡ, ಮಧುಮೇಹ, ಆಸ್ತಮ, ಬೆನ್ನುನೋವು, ಹೃದಯ ಸಂಬಂಧವಾದ ವ್ಯಾಧಿಗಳನ್ನು ಗುಣಪಡಿಸಬಹುದು.

ಎರಡನೇ ಡಿಗ್ರಿಯನ್ನು ಮಾಡಿದ ಮೇಲೆ ರೇ ಕೀ ಚಿಕಿತ್ಸಾ ಶಕ್ತಿವೃದ್ಧಿಯಾಗಿ ಬೇಗ ಪರಿಣಾಮ ಬೀರುತ್ತದೆ. ಇನ್ನು ಮುಂದಿನ ಡಿಗ್ರಿಗಳಾದ ಮೂರು, ನಾಲ್ಕು ಮತ್ತು ಐದು ಮಾಡಿದಲ್ಲಿ ರೇ ಕೀ ಚಿಕಿತ್ಸಾ ಶಕ್ತಿಯಲ್ಲಿ ಐದು, ಹತ್ತು ಪಟ್ಟು ಹೆಚ್ಚಾಗುತ್ತದೆ, ಮತ್ತು ಬಹು ದೂರದವರೆಗೂ ವ್ಯಾಪಕ ಶಕ್ತಿಯನ್ನು ಬೀರುತ್ತದೆ.

ರೇ ಕೀ ಯನ್ನು ಕಲಿಯುವವರು ಈ ಕೆಳಗಿನ ನಿಯಮಗಳಂತೆ ನಡೆಯಬೇಕು.

★ ಈ ದಿನ ನಾನು ಯಾರ ಮೇಲೆಯೂ ಕೋಪಿಸಿಕೊಳ್ಳುವುದಿಲ್ಲ.
★ ತಂದೆ, ತಾಯಿ, ಗುರು-ಹಿರಿಯರನ್ನು ಪ್ರೀತಿಸುತ್ತೇನೆ.
★ ಎಲ್ಲಾ ಜೀವಿಗಳನ್ನು ಪ್ರೀತಿಸುತ್ತೇನೆ ಮತ್ತು ಗೌರವಿಸುತ್ತೇನೆ.
★ ಪ್ರಾಮಾಣಿಕತೆಯಿಂದ, ತೃಪ್ತನಾಗಿ ಜೀವನ ನಡೆಸುತ್ತೇನೆ.
★ ಇಂದು ನಾನು ಯಾವ ಕೆಟ್ಟ ಚಿಂತೆಯನ್ನು ಮಾಡುವುದಿಲ್ಲ.

ಈ ಐದು ನಿಯಮಗಳು ಸಾಮಾನ್ಯವಾಗಿ ಎಲ್ಲರಿಗೂ ತಿಳಿದಿರುವವೇ, ಆಗಿದ್ದರೂ ಕೂಡ ಇದರಂತೆ ನಡೆಯುವುದು ಸ್ವಲ್ಪ ಕಷ್ಟವಾಗಬಹುದು.

ರಾಮನಗರಂನಲ್ಲಿ ಇತ್ತೀಚೆಗೆ ನಡೆದ ಜಿಲ್ಲಾಮಟ್ಟದ ಪ್ರೌಢಶಾಲಾ ಬಾಲಕರ ವಾಲೀಬಾಲ್ ಪಂದ್ಯಾಟದಲ್ಲಿ ಶ್ರೀ ಬಸವೇಶ್ವರ ಪ್ರೌಢಶಾಲೆ (ಶ್ರೀ ಸಿದ್ಧಗಂಗಾ ಶಾಖೆ) ಸೋಲೂರು, ಮಾಗಡಿ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ. ಈ ತಂಡ ರಾಜ್ಯಮಟ್ಟಕ್ಕೆ ಆಯ್ಕೆಯಾಗಿದೆ. ವಾಲಿಬಾಲ್ ವಿಜೇತ ತಂಡ ಅಧಿಕಾರಿಗಳೊಂದಿಗೆ ಕುಳಿತಿರುವವರು : ಶ್ರೀ ನರಸಿಂಹಯ್ಯ, ಬಿಇಓ., ನೆಲಮಂಗಲ, ಶ್ರೀ ಗಂಗಾಧರಪ್ಪ, ಬಿಇಓ., ಮಾಗಡಿ, ಶ್ರೀ ನರಸಿಂಹಮೂರ್ತಿ, ಅಧ್ಯಕ್ಷರು, ಬೆಂಗಳೂರು ಗ್ರಾಮಾಂತರ ಜಿಲ್ಲಾ ಪರಿಷತ್, ಶ್ರೀ ದೊಡ್ಡಸಿದ್ದಪ್ಪ, ಡಿಡಿಪಿಐ., ಬೆಂಗಳೂರು ಗ್ರಾಮಾಂತರ ಜಿಲ್ಲೆ, ಶ್ರೀ ಎಂ. ಚನ್ನಯ್ಯ, ಎಚ್.ಎಂ., ಎಸ್.ಬಿ.ಹೆಚ್.ಎಸ್. ಸೋಲೂರು, ಶ್ರೀ ಬಿ.ಆರ್. ರಾಜಶೇಖರ್, ತಂಡದ ಮ್ಯಾನೇಜರ್ ಮತ್ತು ಶ್ರೀ ಡಿ.ಎಸ್. ರಾಜಣ್ಣ ತಂಡದ ದೈಹಿಕ ಶಿಕ್ಷಣ ಶಿಕ್ಷಕರು, ತಂಡದ ನಾಯಕ ಶ್ರೀ ಆರ್. ಕೆಂಪರಾಜು ಅವರುಗಳನ್ನು ಕಾಣಬಹುದು.





## ಶ್ರೀ ವೀರಭದ್ರಸ್ವಾಮಿ ಕನ್ನಡ ಹಿರಿಯ ಪ್ರಾಥಮಿಕ ಹಾಗೂ ಪ್ರೌಢಶಾಲೆ ಕಟ್ಟಡದ ಶಂಕುಸ್ಥಾಪನೆ

ಪರಮಪೂಜ್ಯ ಶ್ರೀ ಶ್ರೀಗಳವರಿಂದ ಗುದ್ದಲಿಪೂಜೆ

"ನಿತ್ಯವೂ ನಡೆಯುತ್ತಲೇ ಇರುವ ಘರ್ಷಣೆ, ಹಿಂಸಾಚಾರ ಮತ್ತು ವಿಧ್ವಂಸಕ ಕೃತ್ಯಗಳಿಂದ ಜಗತ್ತು ಇಂದು ತಲ್ಲಣಗೊಂಡಿದೆ" ಎಂದು ಶ್ರೀ ಸಿದ್ಧಗಂಗಾ ಮಠಾಧ್ಯಕ್ಷರಾದ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಕಳವಳ ವ್ಯಕ್ತಪಡಿಸಿದರು.

ಶ್ರೀ ಸಿದ್ಧಗಂಗಾ ವಿದ್ಯಾಸಂಸ್ಥೆ ಬೆಂಗಳೂರಿನ ಅಗ್ರಹಾರ ದಾಸರಹಳ್ಳಿ ಶಾಖೆಯ ಶ್ರೀ ವೀರಭದ್ರಸ್ವಾಮಿ ಕನ್ನಡ ಹಿರಿಯ ಪ್ರಾಥಮಿಕ ಹಾಗೂ ಪ್ರೌಢಶಾಲೆ ಕಟ್ಟಡಕ್ಕೆ ನವೆಂಬರ್ ೨೧ರಂದು ಶಂಕುಸ್ಥಾಪನೆ ನೆರವೇರಿಸಿ ಪರಮಪೂಜ್ಯ ಶ್ರೀ ಶ್ರೀಗಳವರು ಆಶೀರ್ವಚನ ನೀಡಿದರು.

"ಪ್ರಪಂಚ ಸುಸ್ಥಿತಿಯಲ್ಲಿ ಉಳಿಯಬೇಕಾದರೆ ಮೊದಲು ಎಲ್ಲರೂ ವಿದ್ಯಾವಂತರಾಗಬೇಕು. ವಿದ್ಯೆಯಿಂದ ಮನುಷ್ಯ ನಾಗರಿಕನಾಗುತ್ತಾನೆ" ಎಂದು ತಿಳಿಸಿದ ಶ್ರೀ ಶ್ರೀಗಳವರು "ಜಗತ್ತಿನ ಜೀವಕೋಟಿಯಲ್ಲಿ ಶ್ರೇಷ್ಠನಾದ ಮಾನವ ತನ್ನ ಜೀವನವನ್ನು ಪರರ ಹಿತಕ್ಕಾಗಿ ಮುಡಿಪಾಗಿಡಬೇಕೆಂದು" ಹಿತ ನುಡಿದರು.

ದೇಶಕ್ಕೆ ಸ್ವಾತಂತ್ರ್ಯ ಸಿಕ್ಕಿ ೬೦ ವರ್ಷ ಕಳೆದರೂ ಇಲ್ಲಿ ಈಗಲೂ ಅವಿದ್ಯಾವಂತರಿದ್ದಾರೆ ಎಂದು ವಿಷಾದ ವ್ಯಕ್ತಪಡಿಸಿದ ಪೂಜ್ಯ ಶ್ರೀ ಶ್ರೀಗಳವರು, ಎಲ್ಲರೂ ವಿದ್ಯಾವಂತರಾಗಬೇಕಾದುದು ಇಂದಿನ ತುರ್ತು ಅಗತ್ಯ ಎಂದು ಒತ್ತಿ ಹೇಳಿದರು.

"ವಿದ್ಯಾದಾನ ಅತ್ಯಂತ ಪವಿತ್ರವಾದುದು. ನಗರ ಪ್ರದೇಶಗಳಲ್ಲಿ ವಿದ್ಯಾರ್ಥಿಗಳಿಗೆ ಬೇಕಾದ ಮೂಲಭೂತ ಸೌಕರ್ಯಗಳಿಗೆ ಸ್ಥಳಾವಕಾಶದ ಕೊರತೆ ಇದೆ. ಇಂಥ ಪುಣ್ಯ ಕಾರ್ಯಕ್ಕೆ ಉಳ್ಳವರು ಸ್ಥಳದಾನ ಮಾಡಿ ಪ್ರೋತ್ಸಾಹಿಸಬೇಕು" ಎಂದು ತಿಳಿಸಿದ ಪೂಜ್ಯ ಶ್ರೀ ಶ್ರೀಗಳವರು ಸಮಾರಂಭಕ್ಕೆ ನೆರವಾದವರನ್ನು ಈ ಸಂದರ್ಭದಲ್ಲಿ ಶ್ಲಾಘಿಸಿದರು.

ನಿವೇಶನ ದಾನಿಗಳಾದ ಶ್ರೀ ರಾಮಾಂಜಿನಪ್ಪ ಅವರಿಂದ ಪೂಜ್ಯ ಶ್ರೀಗಳವರ ಪಾದಪೂಜೆ

ಮಹಾನಗರ ಪಾಲಿಕೆ ಮಾಜಿ ಪ್ರತಿಪಕ್ಷ ನಾಯಕ ಶ್ರೀ ಗಂಗಬೈರಯ್ಯ, ಲಯನ್ಸ್ ಮಾಜಿ ಅಧ್ಯಕ್ಷ ಶ್ರೀ ಎಂ. ಪ್ರಭಾಕರ ನಾಯ್ಡು, ನಗರ ಸಭಾ ಸದಸ್ಯರಾದ ಶ್ರೀ ರಾಮಕೃಷ್ಣಯ್ಯ, ಶ್ರೀಮತಿ ರೇವಮ್ಮ ರೇವಣ್ಣ, ಸಮಾಜ ಸೇವಕರಾದ ಶ್ರೀ ಗಣೇಶ್ ರಾವ್, ಡಾ. ರಾಜಗೋಪಾಲ ಹೊಳ್ಳ, ನಿವೃತ್ತ ಮುಖ್ಯ ಶಿಕ್ಷಕ ಶ್ರೀ ಡಿ. ವಿರೂಪಾಕ್ಷಯ್ಯ, ಶ್ರೀಮತಿ ಮನೋರಂಜಿತಮ್ಮ, ಶ್ರೀ ಬೆಟ್ಟಯ್ಯ, ನಿವೇಶ ದಾನಿ ಶ್ರೀ ರಾಮಾಂಜಿನಪ್ಪ ವೇದಿಕೆಯಲ್ಲಿ ಉಪಸ್ಥಿತರಿದ್ದರು.

ಕನ್ನಡ ಹಿರಿಯ ಪ್ರಾಥಮಿಕ ಶಾಲೆಯ ಮುಖ್ಯೋಪಾಧ್ಯಾಯರಾದ ಶ್ರೀ ಕೃಷ್ಣಮೂರ್ತಿ ಸ್ವಾಗತಿಸಿದರು. ಶ್ರೀ ಎಂ. ಮಂಜುನಾಥ್ ವಂದಿಸಿದರು.



ಶ್ರೀ ಕೃಷ್ಣಮೂರ್ತಿ ಅವರಿಂದ ಸ್ವಾಗತ. ವೇದಿಕೆಯಲ್ಲಿ : ಡಾ. ರಾಜಗೋಪಾಲ ಹೊಳ್ಳ, ಪರಮಪೂಜ್ಯ ಶ್ರೀ ಶ್ರೀಗಳವರು, ನಿವೇಶನದಾನಿ ಶ್ರೀ ರಾಮಾಂಜಿನಪ್ಪ, ಸಮಾಜಸೇವಕ ಶ್ರೀ ಗಣೇಶ್‌ರಾವ್, ಮಹಾನಗರ ಪಾಲಿಕೆ ಮಾಜಿ ಪ್ರತಿಪಕ್ಷ ನಾಯಕ ಶ್ರೀ ಗಂಗಬೈರಯ್ಯ ಮೊದಲಾದವರನ್ನು ಕಾಣಬಹುದು.

## ಹೊಂಕರವಳ್ಳಿ ಗ್ರಾಮದಲ್ಲಿ ಶಿವಾನುಭವಗೋಷ್ಠಿ



ಹಾಸನಜಿಲ್ಲೆ ಆಲೂರು ತಾಲ್ಲೂಕು ಹೊಂಕರವಳ್ಳಿ ಗ್ರಾಮದ ಕಾಫಿ ಬೆಳೆಗಾರರಾದ ಶ್ರೀ ಪುಟ್ಟಸ್ವಾಮಿ ಗೌಡರ ಮನೆಯಲ್ಲಿ ೮-೧೧-೨೦೦೨ರಂದು ನಡೆದ ಶಿವಾನುಭವಗೋಷ್ಠಿ ಕಾರ್ಯಕ್ರಮದಲ್ಲಿ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ದಿವ್ಯಸಾನ್ನಿಧ್ಯ ವಹಿಸಿದ್ದರು. ಕಿರಿಕೊಡ್ಲಿ ಮಠದ ಶ್ರೀ ಸದಾಶಿವ ಸ್ವಾಮಿಗಳು, ಕೊಡ್ಲಿಪೇಟೆ ಕಲ್ಲುಮಠದ ಶ್ರೀಮಹಂತ ಸ್ವಾಮಿಗಳು, ಶ್ರೀ ಪಿ. ಬಸವಣ್ಣನವರ ಕುಟುಂಬ ವರ್ಗದವರು ಹಾಗೂ ರಾಯರ ಕೊಪ್ಪಲು ಶ್ರೀ ಮಲ್ಲಣ್ಣ ಅವರುಗಳು ಉಪಸ್ಥಿತರಿದ್ದರು

ನವೆಂಬರ್ ೮, ೨೦೦೨ರಂದು ಹಾಸನ ಜಿಲ್ಲೆ ಆಲೂರು ತಾಲ್ಲೂಕು ಹೊಂಕರವಳ್ಳಿ ಗ್ರಾಮದ ಕಾಫಿ ಬೆಳೆಗಾರರಾದ ಶ್ರೀ ಪುಟ್ಟಸ್ವಾಮಿಗೌಡರ ಮಗ ಶ್ರೀ ಬಸವಣ್ಣನವರ ಮನೆಯಲ್ಲಿ ಶಿವಾನುಭವಗೋಷ್ಠಿ ಕಾರ್ಯಕ್ರಮ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ದಿವ್ಯ ಸಾನ್ನಿಧ್ಯದಲ್ಲಿ ನಡೆಯಿತು. ಕಾರ್ಯಕ್ರಮ ಕಿರಿಕೊಡ್ಲಿ ಮಠದ ಶ್ರೀ ಸದಾಶಿವ ಸ್ವಾಮಿಗಳವರ ಸ್ವಾಗತದೊಂದಿಗೆ ಆರಂಭವಾಯಿತು. ದಿವ್ಯ ಸಾನ್ನಿಧ್ಯ ವಹಿಸಿದ್ದ ಪರಮ ಪೂಜ್ಯ ಶ್ರೀ ಶ್ರೀಗಳವರು. ತಮ್ಮ ಆಶೀರ್ವಚನದಲ್ಲಿ ''ಇಂದು ಮನುಷ್ಯ ಮನುಷ್ಯನಾಗಿ ಬಾಳುವುದನ್ನು ಮರೆತಿದ್ದಾನೆ. ಪ್ರತಿಯೊಬ್ಬರೂ ಕಾಯದಿಂದ ಜೀವನ ನಡೆಸುವಂತಾಗಬೇಕು. ಬಸವಣ್ಣನವರ ಸಪ್ತ ಸೂತ್ರಗಳನ್ನು ಜೀವನದಲ್ಲಿ ಅಳವಡಿಸಿಕೊಳ್ಳಬೇಕು'' ಎಂದು ತಿಳಿಸಿದರು.





## ಮಹಾದಾಸೋಹ ನಿಧಿಗೆ ೨೦೦೧ ರೂ.ಗಳಿಗೂ ಹೆಚ್ಚು ಕಾಣಿಕೆಯನ್ನು ನೀಡಿದವರ ಪಟ್ಟಿ

(ಮುಂದುವರೆದುದು)

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| ೭೬೪. | ಶ್ರೀ ಎ. ಪರಮಶಿವಯ್ಯ<br>'ಸುರಭಿ ನಿಲಯ', ೪ನೇ ಕ್ರಾಸ್,<br>ಆದರ್ಶನಗರ ಬಡಾವಣೆ, ಅಡ್ಲಿಮನೆ ರಸ್ತೆ,<br>ಹಾಸನ ಟೌನ್. | ೨,೦೦೧.೦೦ |
| ೭೬೫. | ಡಾ. ಆರ್.ಎನ್. ನಂಜುಂಡಯ್ಯ<br>ನಂ. ೮, ೪ನೇ ಕ್ರಾಸ್,<br>ಅಮರಜ್ಯೋತಿ ನಗರ, ವಿಜಯನಗರ,<br>ಬೆಂಗಳೂರು – ೫೬೦ ೦೪೦. | ೫,೦೦೧.೦೦ |
| ೭೬೬. | ಶ್ರೀ ಬಿ.ಕೆ. ಚನ್ನಣ್ಣ<br>ನಂ. ೩೬೮, ೧೪ನೇ ಕ್ರಾಸ್, ಸದಾಶಿವನಗರ,<br>ಬೆಂಗಳೂರು – ೫೬೦ ೦೮೦. | ೫,೦೦೧.೦೦ |
| ೭೬೭. | ಪ್ರೊ. ಚಂದ್ರಶೇಖರಯ್ಯ<br>ನಂ. ೧೧೬೫, 'ಶಾಶ್ವತಿ',<br>ಟಿ.ಕೆ. ಬಡಾವಣೆ, ೪ನೇ ಹಂತ,<br>ಮೈಸೂರು – ೫೭೦ ೦೨೩. | ೨೫,೦೦೦.೦೦ |
| ೭೬೮. | ಶ್ರೀ ಹೆಚ್.ಜಿ. ಗುರುಪ್ರಸಾದ್<br>'ಹೊಂಬೆಳಗು', ನಂ. ೧೧೧೫,<br>೧ನೇ ಕ್ರಾಸ್, ಲಲಿತಾದ್ರಿ ರಸ್ತೆ,<br>ಸಿ ಮತ್ತು ಡಿ ಬ್ಲಾಕ್, ಕುವೆಂಪುನಗರ,<br>ಮೈಸೂರು – ೫೭೦ ೦೨೩. | ೧,೦೦೧.೦೦ |
| ೭೬೯. | ಶ್ರೀ ಎನ್. ಗೋವಿಂದಯ್ಯ<br>ನಿವೃತ್ತ ಶಿಕ್ಷಕರು,<br>ಚಂದ್ರಮೌಳೇಶ್ವರ ಬಡಾವಣೆ,<br>ಕ್ಯಾತ್ಸಂದ್ರ, ತುಮಕೂರು – ೫೭೨ ೧೦೪ | ೫,೦೦೧.೦೦ |
| ೭೭೦. | ಶ್ರೀ ಶಾಂತವೀರಸ್ವಾಮಿಗಳು<br>ಕಣ್ಣೂರು ಮಕ್ಕಳದೇವರಮಠ,<br>ಸುಗ್ಗನಹಳ್ಳಿ ಅಂಚೆ, ಮಾಗಡಿ ತಾಲ್ಲೂಕು,<br>ಬೆಂಗಳೂರು ಗ್ರಾಮಾಂತರ ಜಿಲ್ಲೆ. | ೫,೫೨೦.೦೦ |
| ೭೭೧. | ಶ್ರೀ ಹೆಚ್. ಓಂಕಾರಮೂರ್ತಿ<br>'ಹೊನ್ನಾಗಂಗ ನಿಲಯ' ೧೪ನೇ ಕ್ರಾಸ್,<br>ನಂದಿನಿ ಬಡಾವಣೆ, ಎಸ್.ಐ.ಟಿ. ಬಡಾವಣೆ,<br>ತುಮಕೂರು – ೫೭೨ ೧೦೧. | ೨,೦೦೧.೦೦ |
| ೭೭೨. | ಶ್ರೀಮತಿ ಪುಟ್ಟಮ್ಮ ಮತ್ತು ಚನ್ನಪ್ಪ<br>ಚಿಕ್ಕ ಹೆಜ್ಜಾಜಿ, ದೊಡ್ಡ ಹೆಜ್ಜಾಜಿ ಅಂಚೆ,<br>ದೊಡ್ಡಬಳ್ಳಾಪುರ ತಾಲ್ಲೂಕು<br>ಬೆಂಗಳೂರು ಗ್ರಾಮಾಂತರ ಜಿಲ್ಲೆ. | ೫,೦೦೧.೦೦ |
| ೭೭೩. | ಶ್ರೀಮತಿ ಸಿದ್ಧಲಿಂಗಮ್ಮ ಕೋಂ ಲಿಂ. ಲಿಂಗಪ್ಪ<br>ಕರೇಗುಡ್ಡದಹಳ್ಳಿ, ಚಿಕ್ಕಬಾಣಾವಾರ ಅಂಚೆ,<br>ಯಶವಂತಪುರ ಹೋಬಳಿ,<br>ಬೆಂಗಳೂರು ಉತ್ತರ ತಾಲ್ಲೂಕು | ೧೦,೦೦೦.೦೦ |
| ೭೭೪. | ಶ್ರೀ ಬಿ. ಬಸವರಾಜು<br>ಕಿತ್ತಲೆಮನೆ ಎಸ್ಟೇಟ್,<br>ಬಾಳ್ಳುಪೇಟೆ ಮತ್ತು ಅಂಚೆ,<br>ಹಾಸನ ಜಿಲ್ಲೆ. | ೫೦,೦೦೦.೦೦ |
| ೭೭೫. | ಶ್ರೀಮತಿ ಕೆ.ಎಸ್. ಶೈಲಜಾ ಮತ್ತು ಡಾ. ಗಂಗಣ್ಣ<br>ಶ್ರೀ ಸಿದ್ಧರಾಮೇಶ್ವರ ನಿಲಯ,<br>ಸಿದ್ಧಗಂಗಾ ಬಡಾವಣೆ,<br>ತುಮಕೂರು. | ೨,೦೦೦.೦೦ |
| ೭೭೬. | ಅಧ್ಯಕ್ಷರು<br>ಸಿದ್ಧಗಂಗಾ ತಾಂತ್ರಿಕ ಮಹಾವಿದ್ಯಾಲಯ<br>ನೌಕರರ ಸಹಕಾರ ಸಂಘ, ಲಿ.,<br>ಎಸ್.ಐ.ಟಿ., ತುಮಕೂರು. | ೭,೬೬೯-೩೪ |
| ೭೭೭. | ಶ್ರೀ ಶಿವಶಂಕರ್ ಕೆ. ಪಾಟೀಲ್<br>ಸೋಮನಾಥಹಳ್ಳಿ, ಜೇವರ್ಗಿ ತಾಲ್ಲೂಕು,<br>ಗುಲ್ಬರ್ಗಾ ಜಿಲ್ಲೆ. | ೫,೦೦೦.೦೦ |
| ೭೭೮. | ಶ್ರೀ ಜಿ.ಆರ್. ಅನಿಲ್<br>ಬಿನ್ ಜಿ.ಹೆಚ್. ರೇಣುಕೇಶ್<br>ಲತಾ ನಿವಾಸ, ೪ನೇ ಕ್ರಾಸ್,<br>ಸಿದ್ಧಗಂಗಾ ಬಡಾವಣೆ,<br>ತುಮಕೂರು – ೫೭೨ ೧೦೩. | ೫,೦೦೦.೦೦ |
| ೭೭೯. | ಶ್ರೀ ತುಲಸೀರಾಮಯ್ಯ<br>ನಂ. ೭೩, ೪ನೇ ಮುಖ್ಯರಸ್ತೆ, ೭ನೇ ಕ್ರಾಸ್,<br>ಮಹಾಲಕ್ಷ್ಮೀ ಬಡಾವಣೆ,<br>ಮುಂದುವರಿದ ಬಡಾವಣೆ<br>ಬೆಂಗಳೂರು – ೫೬೦ ೦೮೬. | ೩,೦೦೦.೦೦ |
| ೭೮೦. | ಶ್ರೀ ಎಂ. ಚನ್ನಬಸಪ್ಪ<br>ನಂ. ೨೧, ೨೯/೧, ೧ನೇ ಮುಖ್ಯರಸ್ತೆ,<br>೫ನೇ ಕ್ರಾಸ್, ಮೈಸೂರು ರಸ್ತೆ,<br>ಬ್ಯಾಟರಾಯನಪುರ,<br>ಬೆಂಗಳೂರು – ೫೬೦ ೦೨೬. | ೨,೦೧೧.೦೦ |

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| ೭೮೧. | ಶ್ರೀ ಪಿ. ರುದ್ರೇಶ್‌ಕುಮಾರ್ ಬಿನ್ ಪ್ರಭುಸ್ವಾಮಿ<br>ಗುರುವಣ್ಣ ದೇವರಮಠ,<br>ಬಿನ್ನಿಸ್ಸನ್ ಗಾರ್ಡನ್ ಹತ್ತಿರ, ಮಾಗಡಿ ರಸ್ತೆ<br>ಬೆಂಗಳೂರು – ೫೬೦ ೦೫೩. | ೫೦,೦೦೧.೦೦ |
| ೭೮೨. | ಶ್ರೀ ಜಿ.ಬಿ. ಸುವರ್ಣಮ್ಮ<br>ಕೇರಾಫ್ ಲಾವಣ್ಯ ಕೃಪಾಶಂಕರ್,<br>ನಂ. ೮೩, ೩೪ನೇ 'ಬಿ' ಕ್ರಾಸ್,<br>೧೧ನೇ ಮುಖ್ಯರಸ್ತೆ, ಜಯನಗರ,<br>ಬೆಂಗಳೂರು – ೫೬೦ ೦೧೧. | ೨,೦೦೧.೦೦ |
| ೭೮೩. | ಶ್ರೀ ದೊಡ್ಡಹನುಮಯ್ಯ<br>ನಿವೃತ್ತ ಕನ್ನಡ ಶಿಕ್ಷಕರು,<br>ನಂ. ೫೬೦, ಕೃಷ್ಣರಾಜಸಾಗರ ಅಗ್ರಹಾರ,<br>ಕುಣಿಗಲ್ ಪಟ್ಟಣ, ತುಮಕೂರು ಜಿಲ್ಲೆ. | ೫,೦೦೧.೦೦ |
| ೭೮೪. | ಶ್ರೀಮತಿ ಹೆಚ್.ಎಸ್. ಸಿದ್ದಗಂಗಮ್ಮ<br>ಮುಖ್ಯಸ್ಥರು, ಸೋಶಿಯಾಲಜಿ ವಿಭಾಗ,<br>ಶ್ರೀ ಸಿದ್ಧಗಂಗಾ ಮಹಿಳಾ ಕಾಲೇಜು,<br>ತುಮಕೂರು. | ೫,೦೦೨.೦೦<br>(೧೬ನೇ ಕಂತು) |
| ೭೮೫. | ಶ್ರೀ ಪಿ. ಮಂಜುನಾಥ್<br>ನಂ. ೩೫೭, ಬಾಪೂಜಿ ಬಡಾವಣೆ,<br>ಸರಸ್ವತಿ ನಗರ, ವಿಜಯನಗರ,<br>ಬೆಂಗಳೂರು – ೫೬೦ ೦೪೦. | ೧;೦೦೨.೦೦ |
| ೭೮೬. | ಶ್ರೀಮತಿ ಸುಶೀಲಮ್ಮ<br>ನಂ. ೧೨, ೧೮, ಉದಾನಿ ಬಡಾವಣೆ,<br>ಕೇಂಬ್ರಿಡ್ಜ್ ರಸ್ತೆ, ಹಲಸೂರು,<br>ಬೆಂಗಳೂರು. | ೨,೫೦೦.೦೦ |
| ೭೮೭. | ಶ್ರೀ ತಿಪ್ಪೇಸಿದ್ದಯ್ಯ<br>ಎಂ.ಇ.ಎಸ್. ಪ್ರೌಢಶಾಲೆ,<br>೧೦ನೇ ಮುಖ್ಯರಸ್ತೆ, ಜಯನಗರ,<br>ಬೆಂಗಳೂರು – ೫೬೦ ೦೧೧. | ೨,೦೦೧.೦೦ |
| ೭೮೮. | ಶ್ರೀಮತಿ ಲಲಿತಮ್ಮ ಕೋಂ. ಚಿಕ್ಕರಾಜಯ್ಯ<br>ಶಿವಕೃಪ, ಪೈಪ್ ಲೈನ್ ರಸ್ತೆ<br>ಸುಂಕದಕಟ್ಟೆ, ಬೆಂಗಳೂರು – ೯೧. | ೧,೦೦೦.೦೦<br>(೨ನೇ ಕಂತು) |
| ೭೮೯. | ಶ್ರೀ ಕೆ. ಗಂಗಮುತ್ತಯ್ಯ<br>ನಂ. ೩೪೬೬, ೫ನೇ ಕ್ರಾಸ್, ಶಾಂತಿನಗರ,<br>ಬೆಂಗಳೂರು ಗ್ರಾಮಾಂತರ ಜಿಲ್ಲೆ<br>ದೊಡ್ಡಬಳ್ಳಾಪುರ ತಾಲ್ಲೂಕು. | ೧,೦೦೧.೦೦<br>(೧ನೇ ಕಂತು) |

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| ೭೯೦. | ಶ್ರೀ ಸಿ.ಎನ್. ಗಂಗಾಧರಯ್ಯ<br>ಬಿನ್ ಸಿ.ಆರ್. ನಿಡುಗಲ್ಲಯ್ಯ, ಚಿನಿವಾರಹಳ್ಳಿ,<br>ಬೆಳಧರ ಅಂಚೆ, ತುಮಕೂರು ತಾಲ್ಲೂಕು | ೧,೦೦೧.೦೦ |
| ೭೯೧. | ಡಾ. ಸದಾನಂದ<br>ಸದಾನಂದ ಕ್ಲಿನಿಕ್, ಪೀಣ್ಯಾ ೨ನೇ ಹಂತ,<br>ಬೆಂಗಳೂರು – ೫೬೦ ೦೫೮. | ೧೦,೦೦೦.೦೦ |
| ೭೯೨. | ಡಾ. ಬಿ. ಶಿವಪ್ಪ<br>ನಂ. ೪೫೮, ಆರ್.ಎಂ.ವಿ. ಬಡಾವಣೆ,<br>ಸದಾಶಿವನಗರ, ಬೆಂಗಳೂರು – ೮೦. | ೬೦,೦೦೧.೦೦ |
| ೭೯೩. | ಡಾ. ಸೀಮಾದೀಪಕ್<br>ನಂ. ೧, ೧೨ನೇ ಮುಖ್ಯರಸ್ತೆ, ವಸಂತನಗರ,<br>ಬೆಂಗಳೂರು – ೫೬೦ ೦೫೨. | ೨,೦೦೧.೦೦ |
| ೭೯೪. | ಶ್ರೀಮತಿ ಬಿ.ಬಿ. ಪುಷ್ಪಾವತಿ ಕೋಂ. ಪರಮಶಿವಪ್ಪ<br>ರೇಣುಕಾ ಎಸ್ಟೇಟ್, ಅಂಕೀಹಳ್ಳಿ ಅಂಚೆ,<br>ಬೇಲೂರು ತಾಲ್ಲೂಕು,<br>ಹಾಸನ ಜಿಲ್ಲೆ. | ೧,೦೧೦.೦೦<br>(೨ನೇ ಕಂತು) |
| ೭೯೫. | ಶ್ರೀ ಎಸ್. ಗುರುಸ್ವಾಮಿ<br>ನಿವೃತ್ತ ಡಿ.ಎಸ್.ಪಿ.,<br>ದೇವನೂರು, ನಂಜನಗೂಡು ತಾಲ್ಲೂಕು,<br>ಮೈಸೂರು ಜಿಲ್ಲೆ. | ೧,೦೦೧.೦೦<br>(೩ನೇ ಕಂತು) |
| ೭೯೬. | ಶ್ರೀಮತಿ ಗೌರಮ್ಮ ಮತ್ತು ಡಿ.ಎಸ್. ಜಯಣ್ಣ<br>ದೊಡ್ಡೇರಿ, ಕುಲುವನಹಳ್ಳಿ ಅಂಚೆ,<br>ನೆಲಮಂಗಲ ತಾಲ್ಲೂಕು,<br>ಬೆಂಗಳೂರು ಗ್ರಾಮಾಂತರ. | ೨,೦೦೫.೦೦ |
| ೭೯೭. | ಡಾ. ಕೆ.ಎಸ್. ಷಣ್ಮುಖ<br>ಹಾರಬಾಗಹಟ್ಟಿ ಅಟ್ ಪೋಸ್ಟ್,<br>ರಾಮಗಿರಿ ಹೋಬಳಿ,<br>ಹೊಳಲ್‌ಕೆರೆ ತಾಲ್ಲೂಕು,<br>ಚಿತ್ರದುರ್ಗ ಜಿಲ್ಲೆ. | ೧,೦೦೧.೦೦ |
| ೭೯೮. | ಶ್ರೀಮತಿ ಲಲಿತ ಮತ್ತು ಎಂ. ದೊಡ್ಡಸಿದ್ದಪ್ಪ<br>ಮತ್ತು ಕುಟುಂಬವರ್ಗ<br>ಶ್ರೀ ಸಿದ್ಧಗಂಗಾ ನಿಲಯ,<br>ಕೆ.ಎಸ್.ಆರ್.ಪಿ. ಕ್ವಾರ್ಟರ್ಸ್ ಹಿಂಭಾಗ,<br>ತುಮಕೂರು. | ೧೦,೦೦೧.೦೦ |

*(ಮುಂದುವರಿಯುತ್ತದೆ)*





## ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರ ಶತಮಾನೋತ್ಸವ ಸಮಿತಿಗೆ ಒಂದು ಸಾವಿರ ರೂ.ಗಳಿಗಿಂತ ಹೆಚ್ಚು ಹಣವನ್ನು ನೀಡಿದವರ ಹೆಸರು ಮತ್ತು ವಿಳಾಸಗಳು

(ಮುಂದುವರೆದುದು)

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| ೪೨೨. | ಶ್ರೀ ಎಸ್. ಸಿದ್ದಪ್ಪ, ಸಹ ಶಿಕ್ಷಕರು,<br>ಶ್ರೀ ಸುವರ್ಣಮುಖಿ ಪ್ರೌಢಶಾಲೆ<br>ಮಲ್ಲೇಕಾವು, ಕೊರಟಗೆರೆ ತಾಲ್ಲೂಕು. | ೧,೦೦೧.೦೦ |
| ೪೨೩. | ಶ್ರೀ ಎಸ್. ಈಶ್ವರಪ್ಪ, ಹಿಂದಿ ಶಿಕ್ಷಕರು,<br>ಶ್ರೀ ಸುವರ್ಣಮುಖಿ ಪ್ರೌಢಶಾಲೆ,<br>ಮಲ್ಲೇಕಾವು, ಕೊರಟಗೆರೆ ತಾಲ್ಲೂಕು | ೧,೦೦೧.೦೦ |
| ೪೨೪. | ಶ್ರೀ ಈರನಗೌಡ ಬಿನ್ ಕೆ. ನಾಗಪ್ಪ<br>ಕೆಂಚಮ್ಮನಹಳ್ಳಿ, ಹೂವಿನ ಹಡಗಲಿ ತಾ.<br>ಬಳ್ಳಾರಿ ಜಿಲ್ಲೆ. | ೧,೦೦೧.೦೦ |
| ೪೨೫. | ಶ್ರೀ ಜಿ. ಸುಧಾಕರಯ್ಯ, ಸಹ ಶಿಕ್ಷಕರು,<br>ಶ್ರೀ ಶಾಲಿವಾಹನ ಪ್ರೌಢಶಾಲೆ, ತಂಡಗ,<br>ತುರುವೇಕೆರೆ ತಾಲ್ಲೂಕು, ತುಮಕೂರು ಜಿಲ್ಲೆ. | ೧,೦೦೧.೦೦ |
| ೪೨೬. | ಶ್ರೀ ಪುಟ್ಟರುದ್ರಯ್ಯ ಗ್ರೂಪ್, 'ಡಿ' ನೌಕರರು<br>ಶ್ರೀ ಸಿದ್ಧಲಿಂಗೇಶ್ವರ ಸನಿವಾಸ ಪ್ರೌಢಶಾಲೆ<br>ಶ್ರೀ ಸಿದ್ಧಗಂಗಾ ಮಠ,<br>ತುಮಕೂರು – ೪. | ೧,೦೦೧.೦೦ |
| ೪೨೭. | ಶ್ರೀ ಎಂ.ಎನ್. ಯೋಗರಾಜ್,<br>ವೃತ್ತಿ ಶಿಕ್ಷಕರು,<br>ಶ್ರೀ ಸಿದ್ಧಗಂಗಾ ಗ್ರಾಮಾಂತರ ಪ್ರೌಢಶಾಲೆ,<br>ಶುಕ್ರವಾರಸಂತೆ, ಸಕಲೇಶಪುರ ತಾಲ್ಲೂಕು,<br>ಹಾಸನ ಜಿಲ್ಲೆ. | ೧,೦೦೧.೦೦ |
| ೪೨೮. | ಶ್ರೀ ಎಂ. ಚನ್ನಯ್ಯ, ಮುಖ್ಯ ಶಿಕ್ಷಕರು,<br>ಶ್ರೀ ಬಸವೇಶ್ವರ ಪ್ರೌಢಶಾಲೆ,<br>ಸೋಲೂರು, ಮಾಗಡಿ ತಾಲ್ಲೂಕು,<br>ಬೆಂಗಳೂರು ಗ್ರಾಮಾಂತರ ಜಿಲ್ಲೆ. | ೧,೦೦೧.೦೦ |
| ೪೨೯. | ಶ್ರೀಮತಿ ಎಸ್. ವಿಮಲಾ ರುದ್ರೇಶ್<br>ನಂ. ೮, ೬ನೇ 'ಎಫ್' ಕ್ರಾಸ್,<br>೪ನೇ ಮುಖ್ಯರಸ್ತೆ, ಮಾರುತಿನಗರ,<br>ಕಾಮಾಕ್ಷಿಪಾಳ್ಯ, ಬೆಂಗಳೂರು – ೭೯. | ೧,೦೦೧.೦೦ |
| ೪೩೦. | ಶ್ರೀ ಕೆ.ಎಂ. ಗರುಡಯ್ಯ, ಅಧ್ಯಕ್ಷರು,<br>ಕಾವೇರಿ ವಿದ್ಯಾಸಂಸ್ಥೆ, ಶಾಂತಿನಗರ,<br>ತುಮಕೂರು – ೫೭೨ ೧೦೨. | ೧,೨೫೮.೦೦ |
| ೪೩೧. | ಶ್ರೀ ಸಿ. ನಾಗರಾಜು, ವೃತ್ತಿ ಶಿಕ್ಷಕರು,<br>ಶ್ರೀ ಸಿದ್ಧಗಂಗಾ ಗ್ರಾಮಾಂತರ ಪ್ರೌಢಶಾಲೆ<br>ರಘುವನಹಳ್ಳಿ, ಕನಕಪುರ ರಸ್ತೆ<br>ಬೆಂಗಳೂರು – ೫೬೦ ೦೬೭. | ೧,೦೦೧.೦೦ |

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| ೪೩೨. | ಶ್ರೀಮತಿ ಡಿ.ಎಂ. ದ್ರಾಕ್ಷಾಯಣಮ್ಮ<br>ಕನ್ನಡ ಉಪನ್ಯಾಸಕರು,<br>ಶ್ರೀ ಸಿದ್ಧಗಂಗಾ ಪದವಿಪೂರ್ವ ಕಾಲೇಜು,<br>ಬಿ.ಹೆಚ್. ರಸ್ತೆ, ತುಮಕೂರು. | ೧,೦೦೧.೦೦ |
| ೪೩೩. | ಶ್ರೀ ಕೆ.ಎಂ. ಜಯರಾಜು, ಕಾಫಿ ಪ್ಲಾಂಟರ್ಸ್<br>'ಕೆಂಚಾಂಬಿಕ ನಿಲಯ', ೩ನೇ ಕ್ರಾಸ್,<br>ಸಂಪಿಗೆ ರಸ್ತೆ, ಕೆ.ಆರ್. ಪುರಂ,<br>ಹಾಸನ – ೫೭೩ ೨೦೧. | ೧,೦೦೫.೦೦ |
| ೪೩೪. | ಶ್ರೀ ಕೆ.ಎಸ್. ರುದ್ರೇಶಯ್ಯ, ವೃತ್ತಿ ಶಿಕ್ಷಕರು,<br>ಶ್ರೀ ನಿವೇದಿತಾ ಪ್ರೌಢಶಾಲೆ, ಕ್ಯಾತ್ಸಂದ್ರ,<br>ತುಮಕೂರು – ೫೭೨ ೧೦೪. | ೧,೦೦೧.೦೦ |
| ೪೩೫. | ಶ್ರೀಮತಿ ಪಿ. ಶಶಿಕಲಾ, ಸಹ ಶಿಕ್ಷಕರು,<br>ಶ್ರೀ ಬಸವೇಶ್ವರ ಆಂಗ್ಲ ಮಾಧ್ಯಮ ಹಿರಿಯ<br>ಪ್ರಾಥಮಿಕ ಶಾಲೆ, ಬಿ.ಹೆಚ್. ರಸ್ತೆ<br>ತುಮಕೂರು – ೫೭೨ ೧೦೨. | ೯೦೦.೦೦<br>(೨ನೇ ಕಂತು) |
| ೪೩೬. | ಶ್ರೀಮತಿ ಸಿದ್ಧಲಕ್ಷ್ಮೀ, ಸಹ ಶಿಕ್ಷಕರು,<br>ಶ್ರೀ ಬಸವೇಶ್ವರ ಆಂಗ್ಲ ಮಾಧ್ಯಮ ಹಿರಿಯ<br>ಪ್ರಾಥಮಿಕ ಶಾಲೆ, ಬಿ.ಹೆಚ್. ರಸ್ತೆ<br>ತುಮಕೂರು – ೫೭೨ ೧೦೨. | ೯೦೦.೦೦<br>(೨ನೇ ಕಂತು) |
| ೪೩೭. | ಶ್ರೀಮತಿ ಎಸ್. ಶಿವಮ್ಮ, ಸಹ ಶಿಕ್ಷಕರು,<br>ಶ್ರೀ ಬಸವೇಶ್ವರ ಆಂಗ್ಲ ಮಾಧ್ಯಮ ಹಿರಿಯ<br>ಪ್ರಾಥಮಿಕ ಶಾಲೆ, ಬಿ.ಹೆಚ್. ರಸ್ತೆ<br>ತುಮಕೂರು – ೫೭೨ ೧೦೨. | ೯೦೦.೦೦<br>(೨ನೇ ಕಂತು) |
| ೪೩೮. | ಶ್ರೀಮತಿ ಡಿ.ಪಿ. ರಾಜೇಶ್ವರಿ, ಸಹ ಶಿಕ್ಷಕರು,<br>ಶ್ರೀ ಬಸವೇಶ್ವರ ಆಂಗ್ಲ ಮಾಧ್ಯಮ ಹಿರಿಯ<br>ಪ್ರೌಢಶಾಲೆ, ಬಿ.ಹೆಚ್. ರಸ್ತೆ<br>ತುಮಕೂರು – ೨. | ೯೦೦.೦೦ |
| ೪೩೯. | ಕು. ಜಿ. ಸರಸ್ವತಿ, ಸಹ ಶಿಕ್ಷಕಿ,<br>ಶ್ರೀ ಬಸವೇಶ್ವರ ಆಂಗ್ಲ ಮಾಧ್ಯಮ ಹಿರಿಯ<br>ಪಾಠಶಾಲೆ, ಬಿ.ಹೆಚ್. ರಸ್ತೆ<br>ತುಮಕೂರು – ೨. | ೯೦೦.೦೦ |
| ೪೪೦. | ಶ್ರೀ ಎಸ್. ಸದಾಶಿವಯ್ಯ, ಸಹಾಯಕರು,<br>ಶ್ರೀ ಸಿದ್ಧಗಂಗಾ ನರ್ಸಿಂಗ್ ಕಾಲೇಜು,<br>ಬಿ.ಹೆಚ್. ರಸ್ತೆ, ತುಮಕೂರು – ೨. | ೧,೦೦೧.೦೦ |

*(ಮುಂದುವರಿಯುತ್ತದೆ)*

## ಕರ್ನಾಟಕ ರಾಜ್ಯೋತ್ಸವ

"ಎಲ್ಲಾದರು ಇರು ಎಂತಾದರು ಇರು ಎಂದೆಂದಿಗೂ ನೀ ಕನ್ನಡವಾಗಿರು
ಕನ್ನಡ ಗೋವಿನ ಓ ಮುದ್ದಿನ ಕರು ಕನ್ನಡತನ ಒಂದಿದ್ದರೆ ನೀನೆಮ್ಮಗೆ ಕಲ್ಪತರು"
– ರಾಷ್ಟ್ರಕವಿ ಕುವೆಂಪು

ಕನ್ನಡ ಕುಲಪುತ್ರರೆಲ್ಲರ ಅವಿರತ ಶ್ರಮ ಮತ್ತು ಮಹತ್ಕಾರ್ಯದ ಫಲವೇ ಏಕೀಕೃತ ಕರ್ನಾಟಕ, ೧೯೫೬ ನವೆಂಬರ್ ೧ರಂದು ಚೆಲುವ ಕನ್ನಡನಾಡು "ಕರ್ನಾಟಕ"ದ ಉದಯ.

ಈ ಕರ್ನಾಟಕ ಮನ ಪುಳಕಿತಗೊಳಿಸುವ ಪುಣ್ಯಭೂಮಿ. ಅಸಾಧಾರಣವಾದುದನ್ನು ಸಾಧಿಸಲು ಸ್ಫೂರ್ತಿ ನೀಡುವ ನೆಲ, ಕಲೆಗಳ ತವರು, ಸಾಹಿತ್ಯ ಸಂಸ್ಕೃತಿಗಳ ಆಗರ. ಜ್ಞಾನದ ಅಪೂರ್ವ ಭಂಡಾರ, ಪಂಪ, ರನ್ನ, ಪೊನ್ನ, ಜನ್ನರಂತಹ ಕವಿಪುಂಗವರೂ, ಬಸವ, ಅಲ್ಲಮರಂತಹ ಶ್ರೇಷ್ಠ ವಚನಕಾರರೂ, ದಾಸವರೇಣ್ಯರೂ ತಮ್ಮ ತನುಮನಧರ್ಮಗಳಿಂದ ಕನ್ನಡ ಸಾಹಿತ್ಯ, ಸಂಸ್ಕೃತಿಯನ್ನು ಶ್ರೀಮಂತಗೊಳಿಸಿ ಚಿರಸ್ಮರಣೀಯರಾಗಿದ್ದಾರೆ. ಸಾಹಿತ್ಯ ಕ್ಷೇತ್ರದ ಅತ್ಯುನ್ನತ ಪ್ರಶಸ್ತಿ "ಜ್ಞಾನಪೀಠ ಪ್ರಶಸ್ತಿ" ವಿಜೇತರಾದ ಕುವೆಂಪು, ದ.ರಾ. ಬೇಂದ್ರೆ, ಮಾಸ್ತಿ ವೆಂಕಟೇಶ್ ಅಯ್ಯಂಗಾರ್, ಶಿವರಾಮ ಕಾರಂತ, ವಿ.ಕೃ. ಗೋಕಾಕ್, ಯು.ಆರ್. ಅನಂತಮೂರ್ತಿ, ಗಿರೀಶ್ ಕಾರ್ನಾಡ್‌ರಂತಹ ಖ್ಯಾತ ಸಾಹಿತಿಗಳು, ಕಲಾವಿದರು, ಸಂಗೀತಜ್ಞರು, ವಿಜ್ಞಾನಿಗಳು, ಕ್ರೀಡಾಪಟುಗಳು ತಮ್ಮ ಅಪ್ರತಿಮ ಸಾಧನೆಗಳಿಂದ ವಿಶ್ವಭೂಪಟದಲ್ಲಿ ಕರ್ನಾಟಕದ ಛಾಪು ಮೂಡಿಸಿರುವುದು ನಾಡಿನ ಜನತೆ ಹೆಮ್ಮೆಪಡುವ ಸಂಗತಿ.

ಇಂತಹ ಶ್ರೇಷ್ಠ ಸಾಹಿತ್ಯ ಮತ್ತು ಸಂಸ್ಕೃತಿಯ ವಾರಸುದಾರರಾದ ನಾವು ಕನ್ನಡಾಂಬೆಯ ಕೀರ್ತಿ ಎಲ್ಲೆಡೆ ಮೊಳಗುವಂತೆ ಕಾರ್ಯತತ್ಪರರಾಗೋಣ. ಭಾವೈಕ್ಯತೆಯನ್ನು ಬೆಳಗೋಣ.

### ಸಾಂಸ್ಕೃತಿಕ ಪರಂಪರೆಯ ಘೋಷಣೆ

★ ಕಲೆ ಹಾಗೂ ಸಾಹಿತ್ಯ ಕ್ಷೇತ್ರದಲ್ಲಿ ಅಪ್ರತಿಮ ಸೇವೆ ಸಲ್ಲಿಸಿದ ಕಲಾವಿದರ ಮಾಸಾಶನವನ್ನು ೨೫೦ ರಿಂದ ೫೦೦ ರೂ.ಗಳಿಗೆ ಹೆಚ್ಚಿಸಲಾಗಿದೆ.

★ ವಿನೂತನ "ದಾಸ ಸಾಹಿತ್ಯವಾಹಿನಿ" ಯೋಜನೆಯ ಮೂಲಕ ದಾಸವರೇಣ್ಯರ ೧೬,೦೦೦ಕ್ಕೂ ಹೆಚ್ಚು ದಾಸರ ಕೀರ್ತನೆಗಳನ್ನು ಕಂಪ್ಯೂಟರ್‌ನಲ್ಲಿ ಅಳವಡಿಸಿ ವಿಶ್ವದೆಲ್ಲೆಡೆ ಲಭ್ಯವಾಗುವಂತೆ ವ್ಯವಸ್ಥೆ ಕಲ್ಪಿಸಲಾಗಿದೆ.

★ ಯುವಜನಾಂಗದಲ್ಲಿ ಸಾಂಸ್ಕೃತಿಕ ಜಾಗೃತಿ ಮೂಡಿಸಲು ಯುವ ಪ್ರತಿಭೆ, "ಸ್ಪಂದನ" ವಿಶೇಷ ಕಾರ್ಯಕ್ರಮ.

★ ಎಲ್ಲ ಕಲೆಗಳನ್ನೂ ಒಂದೇ ಸೂರಿನಡಿ ತರುವ "ಕಲಾಗ್ರಾಮ" ಯೋಜನೆ.

★ ಸಾಹಿತ್ಯ, ಸಂಗೀತ ಇತ್ಯಾದಿ ಕಲೆಗಳಲ್ಲಿ ವಿಶಿಷ್ಟ ಸೇವೆ ಸಲ್ಲಿಸಿದ ಚೇತನಗಳಿಗೆ ರಾಜ್ಯ ಹಾಗೂ ರಾಷ್ಟ್ರ ಮಟ್ಟದ ಪ್ರಶಸ್ತಿಗಳು.

★ ಸಾಂಸ್ಕೃತಿಕ ಡೈರೆಕ್ಟರಿ ರಾಜ್ಯಾದ್ಯಂತ ಎಲ್ಲಾ ಜಾನಪದ ಮತ್ತು ಇತರ ಕಲಾವಿದರ ಮಾಹಿತಿ ಕಂಪ್ಯೂಟರ್‌ನಲ್ಲಿ ಅಳವಡಿಕೆ.

★ ಪ್ರಾಚ್ಯ ವಸ್ತುಗಳ ಡೈರೆಕ್ಟರಿ ಮೂಲಕ ರಾಜ್ಯದ ೩,೦೦೦ಕ್ಕೂ ಹೆಚ್ಚು ಐತಿಹಾಸಿಕ ಸ್ಮಾರಕಗಳು ಹಾಗೂ ಎಲ್ಲ ವಸ್ತು ಸಂಗ್ರಹಾಲಯಗಳ ಬಗ್ಗೆ ಮಾಹಿತಿ ಹಾಗೂ ಭಾವಚಿತ್ರಗಳು ಕಂಪ್ಯೂಟರ್‌ನಲ್ಲಿ ಅಳವಡಿಕೆ.

★ ಸಾಂಸ್ಕೃತಿಕ ಚಟುವಟಿಕೆಗಳ ವಿಕೇಂದ್ರೀಕರಣ ತಾಲ್ಲೂಕು ಕೇಂದ್ರಗಳ ಸಾಂಸ್ಕೃತಿಕ ಸಂಸ್ಥೆಗಳಿಗೆ ೨೫,೦೦೦ ರೂ.ಗಳ ಧನಸಹಾಯ.

### ಕನ್ನಡಕ್ಕೆ ಹೆಚ್ಚಿನ ಒತ್ತಾಸೆ

★ ೧ ರಿಂದ ೧೦ನೇ ತರಗತಿಯವರೆಗೆ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ವಿದ್ಯಾರ್ಥಿಗಳಿಗೆ ಬಿ.ಇ., ಎಂ.ಬಿ.ಬಿ.ಎಸ್., ಮತ್ತು ಬಿ.ಡಿ.ಎಸ್. ಕೋರ್ಸುಗಳ ಪ್ರವೇಶದಲ್ಲಿ ಶೇ. ೫ರಷ್ಟು ಸಮಾನಾಂತರ ಒಳಮೀಸಲಾತಿ.

★ ವೃತ್ತಿ ಶಿಕ್ಷಣ ಮತ್ತು ಉನ್ನತ ಶಿಕ್ಷಣದ ಇತರೆ ಕೋರ್ಸ್‌ಗಳಿಗೂ ಶೇ. ೫ರಷ್ಟು ಸಮಾನಾಂತರ ಮೀಸಲಾತಿಯ ವಿಸ್ತರಣೆ.

★ ೧ ರಿಂದ ೧೦ನೇ ತರಗತಿಯವರೆಗೆ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ವಿದ್ಯಾರ್ಥಿಗಳಿಗೆ ಸರ್ಕಾರಿ ಉದ್ಯೋಗಗಳಲ್ಲಿ ಶೇ. ೫ರಷ್ಟು ಸಮಾನಾಂತರ ಒಳಮೀಸಲಾತಿ.

★ ತಾಂತ್ರಿಕ ಮತ್ತು ವೈದ್ಯಕೀಯ ಪದವಿ ಕೋರ್ಸ್‌ಗಳಲ್ಲಿ ಮೊದಲ ವರ್ಷದಲ್ಲಿ ಒಂದು ಪಠ್ಯ ವಿಷಯವಾಗಿ ಕನ್ನಡದ ಅಳವಡಿಕೆ.

★ ಪದವಿ ಪೂರ್ವ ತರಗತಿಯಲ್ಲಿ ಐಚ್ಛಿಕ ಕನ್ನಡ ವಿಷಯ ಆರಂಭ

ಸರ್ವರಿಗೂ ೪೭ನೇ ಕನ್ನಡ ರಾಜ್ಯೋತ್ಸವದ ಶುಭಾಶಯಗಳು

"ಕರ್ನಾಟಕ ವಾರ್ತೆ"



# ವೀರಶೈವ ಸಹಕಾರ ಬ್ಯಾಂಕ್ ನಿಯಮಿತ

ಆಡಳಿತ ಕಛೇರಿ :
ನಂ. 1732/32, ಎಂ.ಸಿ. ರಸ್ತೆ, ಎಂ.ಸಿ. ಬಡಾವಣೆ,
ವಿಜಯನಗರ, ಬೆಂಗಳೂರು-560 040.
: 3358017, 3307070

ಮುಖ್ಯ ಶಾಖೆ :
ನಂ.1, ಅಕ್ಕಮಹಾದೇವಿ ರಸ್ತೆ, ಅಕ್ಕಿಪೇಟೆ,
ಬೆಂಗಳೂರು - 560 053.
: 2871003, 2282224. 2351644

**ಗಣಕೀಕೃತ ಶಾಖೆಗಳು :**

ನಂ. 265/ಡಿ, ಕನಕಪುರ ಮುಖ್ಯ ರಸ್ತೆ, 7ನೇ ಬ್ಲಾಕ್, ಜಯನಗರ, ಬೆಂಗಳೂರು-52 ✆ : 6549183, 6533651

ನಂ. 395/32, 12ನೇ ಮುಖ್ಯರಸ್ತೆ, 6ನೇ ವಿಭಾಗ, ಡಾ. ರಾಜಕುಮಾರ್ ರಸ್ತೆ, ರಾಜಾಜಿನಗರ, ಬೆಂಗಳೂರು-10. ✆ : 3402145, 3112145

ನಂ. 1732/32, ಎಂ.ಸಿ. ರಸ್ತೆ, ಎಂ.ಸಿ. ಬಡಾವಣೆ, ವಿಜಯನಗರ, ಬೆಂಗಳೂರು-560 040. ✆ : 3307070, 3358017,

ನಂ. 324, 8ನೇ ಮುಖ್ಯರಸ್ತೆ, 1ನೇ ಅಡ್ಡರಸ್ತೆ, 3ನೇ ಹಂತ, ಬಸವೇಶ್ವರನಗರ, ಬೆಂಗಳೂರು-79. ✆ : 3485393, 3288933

❖ ರಿಸರ್ವ್ ಬ್ಯಾಂಕ್ ನಿಯಮಾವಳಿಗೆ ಒಳಪಟ್ಟಿದೆ.
❖ ಸೇಫ್ ಡಿಪಾಸಿಟ್ ಲಾಕರುಗಳ ವ್ಯವಸ್ಥೆಯಿದೆ.
❖ ಠೇವಣಿಗಳಿಗೆ ವಿಮಾ ಸೌಲಭ್ಯ ಒದಗಿಸಲಾಗಿದೆ.

ನೀವು ತೊಡಗಿಸುವ ಹಣಕ್ಕೆ ಸುರಕ್ಷೆ ಒದಗಿಸುವ ಸಂಸ್ಥೆ. ನೀವು ತೊಡಗಿಸುವ ಹಣವನ್ನು ಇಮ್ಮಡಿಯಾಗಿ ಅಥವಾ ಮುಮ್ಮಡಿಯಾಗಿ ಹೆಚ್ಚಿಸುವ ಅವಕಾಶವಿರುವ ಸಂಸ್ಥೆ. ನಿಮ್ಮ ಮಕ್ಕಳ, ನಿಮ್ಮ ಆಶ್ರಿತರ ಹಾಗೂ ನಿಮ್ಮ ಭವಿಷ್ಯದ ಹಿತರಕ್ಷಣೆ ಮಾಡುವ ಸಂಸ್ಥೆ.

*(ಲಕ್ಷ ರೂ.ಗಳಲ್ಲಿ) (31-03-2002ಕ್ಕೆ)*

| | | | |
|---|---|---|---|
| ಷೇರು ಬಂಡವಾಳ | : 270.46 | ಸಾಲಗಳು ಮತ್ತು ಮುಂಗಡ | : 4697.42 |
| ಕಾಯ್ದಿಟ್ಟ ಹಾಗೂ ಇತರೆ ನಿಧಿಗಳು | : 427.42 | ಹೂಡಿಕೆಗಳು | : 2731.46 |
| ಠೇವಣಿಗಳು | : 7097.64 | ದುಡಿಯುವ ಬಂಡವಾಳ | : 7795.26 |

**ಕಾರ್ಯಕಾರಿ ಮಂಡಳಿ**

ಶ್ರೀ ಬಿ.ಎಸ್. ಪರಮಶಿವಯ್ಯ, ಎಂ.ಎ.,
ಅಧ್ಯಕ್ಷರು

ಶ್ರೀ ವೈ.ಟಿ. ಮಹಾದೇವಪ್ಪ
ಉಪಾಧ್ಯಕ್ಷರು

**ನಿರ್ದೇಶಕರು**

ಶ್ರೀ ಬಿ.ಜಿ. ನಾಗಬಸಪ್ಪ
ಶ್ರೀ ಎಲ್. ರಾಜಪ್ಪ
ಡಾ. ಮಲ್ಲಿಕಾರ್ಜುನ್, ಎಂ.ಎ., ಪಿ.ಎಚ್‌ಡಿ.
ಶ್ರೀ. ಜಿ. ಶಿವಕುಮಾರ್, ಡಿ.ಎಂ.ಇ.
ಶ್ರೀ ಬಿ.ಎಸ್. ಸಚ್ಚಿದಾನಂದಮೂರ್ತಿ, ಎಂ.ಎ.

ಶ್ರೀ ಆರ್.ಜಿ. ಶಿವಕುಮಾರ್
ಶ್ರೀ ಬಿ.ಎಸ್. ಬಾಲರಾಜ್, ಬಿ.ಎಸ್ಸಿ, ಟೆಕ್ಸ್‌ಟೈಲ್ಸ್
ಶ್ರೀ ಎನ್.ಎಸ್. ಶಿವಶಂಕರ್
ಶ್ರೀ ಕೆ.ಆರ್. ರಾಮಯ್ಯ, ಎಂ.ಎ., ಬಿ.ಇ.ಡಿ.,
ಶ್ರೀಮತಿ ಜಿ.ಎನ್. ಚಂದ್ರಾವತಿ ಬಿ.ಟಿ. ಉಮೇಶ್

**ಪ್ರಧಾನ ವ್ಯವಸ್ಥಾಪಕರು**
ಶ್ರೀ ಬಿ.ವಿ. ನಾಗರಾಜ, ಬಿ.ಕಾಂ., ಡಿ.ಸಿ.ಬಿ.,

RNI No. 17139/69

"Siddaganga" Monthly - postal Reg.No. KA/SK/TMR/385/2002



ನವೆಂಬರ್ ೨೪ರಂದು ಶ್ರೀಮಠದ ೨೦೦೫ರ ದಿನದರ್ಶಿಯನ್ನು ಪರಮಪೂಜ್ಯ ಶ್ರೀ ಶ್ರೀಗಳವರು ಬಿಡುಗಡೆ ಮಾಡುತ್ತಿರುವುದು. ಈ ಸಂದರ್ಭದಲ್ಲಿ ಶ್ರೀ ಮಠದ ಆಡಳಿತಾಧಿಕಾರಿಗಳಾದ ಶ್ರೀ ಪಿ.ಎಸ್. ಪುಟ್ಟಶಂಕರಯ್ಯ, ಹಳೇ ವಿದ್ಯಾರ್ಥಿ ಹಾಗೂ ಹಿತೈಷಿಗಳ ಸಂಘದ ಕಾರ್ಯದರ್ಶಿ ಶ್ರೀ ಕೆ.ಹೆಚ್. ಶಿವರುದ್ರಯ್ಯ, ಮೊದಲಾದವರು ಉಪಸ್ಥಿತರಿದ್ದರು.



ನೆಲಮಂಗಲ ತಾಲ್ಲೂಕು ಯುವ ಕಾಂಗ್ರೆಸ್ ಅಧ್ಯಕ್ಷರು ಹಾಗೂ ಡಿ.ಸಿ.ಸಿ. ಸದಸ್ಯರಾದ ಶ್ರೀ ಬಿ. ಚಂದ್ರಪ್ಪನವರು ಬೆಂಗಳೂರು ಉತ್ತರ ತಾಲ್ಲೂಕು ಬೈಲಪ್ಪನಪಾಳ್ಯದಲ್ಲಿ ನೂತನವಾಗಿ ಕಟ್ಟಿಸಿರುವ ಗೃಹಪ್ರವೇಶ ಕಾರ್ಯಕ್ರಮದಲ್ಲಿ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಶಿವಪೂಜೆಯಲ್ಲಿ ಭಾಗವಹಿಸಿದ್ದರು. ಚಿತ್ರದಲ್ಲಿ : ಶ್ರೀ ಬಿ. ಚಂದ್ರಪ್ಪ ಮತ್ತು ಶ್ರೀಮತಿ ಸಿ. ಪದ್ಮಾವತಿ ಹಾಗೂ ಕುಟುಂಬ ವರ್ಗದವರು ಮತ್ತು ಬೈಯಂಡಹಳ್ಳಿ ಶ್ರೀ ಪರಮಶಿವಯ್ಯ ಅವರನ್ನು ಕಾಣಬಹುದು.